ಕಲ್ಪನಾ ಗ್ರಂಥಮಾಲಾ— ೩

# ಫಲಸಂಚಯ



ಲೇಖಕರು :

ವರದರಾಜ ಹುಯಿಲಗೋಳ



ಕಲ್ಪನಾ

ಗ್ರಂಥಪ್ರಕಾಶನ ಸಮಿತಿ, ಹುಬ್ಬಳ್ಳಿ

೧೯೪೮ ಬೆಲೆ : ೧-೮-೦

# ಕಲ್ಪನಾ ಗ್ರಂಥಮಾಲಾ, ಹುಬ್ಬಳ್ಳಿ

ಸಂಪಾದಕರು :

**ಹಿರೇಮಲ್ಲೂರ ಈಶ್ವರನ್ ಎಂ. ಎ.**
**ಮಿರ್ಜಿ ಅಣ್ಣಾರಾಯರು**



ವರುಷಕ್ಕೆ ೭೫೦ ಪುಟಗಳು
**ಚಂದಾ ಹಣ ೫-೮-೦**

ನಮ್ಮ ಮುಖ್ಯ ಮಾರಾಟಗಾರರು :
**ಎಫ್. ಜಿ. ನೀರಲಕಟ್ಟಿ, ಸಾಹಿತ್ಯನಿಕೇತನ, ಧಾರವಾಡ**

ಮುದ್ರಕರು :
ಎಚ್. ಬಿ. ನವಲೂರ
ಹಿಂದಮಾತಾ ಮುದ್ರಣಾಲಯ,
ಧಾರವಾಡ

ಪ್ರಕಾಶಕರು :
ಬಿ. ಜಿ. ಅವಧಾನಿ
ಮಿಂಚಿನಬಳ್ಳಿ, ಚಾವಡಿ, ಧಾರವಾಡ
(ಕಲ್ಪನಾ ಗ್ರಂಥಮಾಲೆಯ ಪರವಾಗಿ)

# ಕಲ್ಪನಾ ಪರಿಚಯ

ಪ್ರಿಯ ಸುಹೃದ,

ಕಲ್ಪನಾ ನಮಗೆ ಪ್ರಿಯದರ್ಶನಿಯಾಗಬೇಕು. ಆಕೆ ಕೋಮಲೆ, ರೂಪವತಿ, ರಾಗಿಣಿ. ಎಲ್ಲಕ್ಕೂ ಮಿಗಿಲಾಗಿ ಅವಳು ತಪಸ್ವಿನಿ. ಅವಳ ಮಾತು ಮುತ್ತು, ನಡತೆ ಗಂಭೀರ, ಧ್ಯೇಯ ಪವಿತ್ರತಮ. ವಸಂತ ಲಕ್ಷ್ಮಿಯಂತೆ ತನ್ನ ಬಾಳು ಸುಂದರವಾಗಬೇಕು, ಬಿದಿಗೆಯ ಚಂದ್ರಮನಂತೆ ತನ್ನ ಚಾರಿತ್ರ್ಯ ನಿರ್ಮಲವಾಗಬೇಕು, ವನಸುಮದಂತೆ ತನ್ನ ಜೀವನ ವಿಕಸಿತವಾಗಬೇಕು—ಆದರಿಂದಾಗಿ ತನ್ನ ಸುತ್ತಣ ಬಾಳನ್ನು ಹಿಗ್ಗಿಸಿ, ಜನಮನವನ್ನು ರಂಜಿಸಿ, ಅವರ ಬದುಕಿನ ಹಂತನ್ನು ಮೇಲಕ್ಕೆತ್ತಿ ನಯಗೊಳಿಸಿ ಮನುಜ ಲೋಕವನ್ನೇ ಮಂದಾರ ಲೋಕವನ್ನಾಗಿ ಪರಿವರ್ತನಗೊಳಿಸಬೇಕೆಂಬ ಹಂಬಲವುಳ್ಳಾಕೆ ನಮ್ಮ ಕಲ್ಪನಾ.

ಈ ನಮ್ಮ ಸ್ವರ್ಣಸ್ವಪ್ನ ರಂಗಿನಿ ಕಲ್ಪನಾ ನಿಮ್ಮ ಹೆಮ್ಮಗಳು. ಕನ್ನಡ ನಾಡಿನ ಕಿರುವಕ್ಕಳು, ಮಾಮೂಗರು, ಕಾವ್ಯಪ್ರಯೋಗ ಪರಿಣತ ಮತಿಗಳು—ಎಲ್ಲರೂ ಇವಳ ಉಡಿಯಲ್ಲಿ ಹಣ್ಣುಕಾಯಿ ತುಂಬಿ, ಹಣೆಗೆ ಕುಂಕುಮವಿಟ್ಟು ಸರ್ವಮಂಗಲೆಯಾಗಲೆಂದು ಹರಕೆಯನ್ನೀಯಬೇಕೆಂದು ನಾವು ವಿನಯಪೂರ್ವಕವಾಗಿ ಕೋರುತ್ತೇವೆ.

ಲಲಿತ ಸಾಹಿತ್ಯ, ಬೌದ್ಧಿಕ ಸಾಹಿತ್ಯ—ರಂಜನೆ, ಬೋಧನೆ—ಜನಮನದ ವಿಕಾಸಕ್ಕಾಗಿ, ಸಂಸ್ಕಾರಕ್ಕಾಗಿ ಯಾವ ಸಾಹಿತ್ಯವನ್ನೆಲ್ಲ ಒದವಿಸಬೇಕೊ ಅದನ್ನೆಲ್ಲ ನಾವು ಕಷ್ಟಪಟ್ಟು ಹುಡುಕಿ ತಂದು ನಮ್ಮ ಪಾಲಿನ ಕಾರ್ಯ ಮಾಡುತ್ತೇವೆ. ಕಲ್ಪನಾ ಈ ನೆಲದ ಮಗಳಾಗಬೇಕೆಂಬ ಔದಾರ್ಯ ಮಾತ್ರ ನೀವು ತೋರಬೇಕು.

ಮಿರ್ಜಿ ಅಣ್ಣಾರಾಯರು ಮತ್ತು ನಾನು ಇಬ್ಬರೂ ಕೂಡಿ ಈ ಕಾರ್ಯಕ್ಕೆ ಕೈಹಾಕಿದ್ದೇವೆ. ಕಲ್ಪನಾಗೆ 'ಫಲಸಂಚಯ' ತಂದುಕೊಟ್ಟ ಹುಯಿಲಗೋಳ ವರದರಾಜರು ನಮ್ಮವರಾಗಿದ್ದಾರೆ. ನಮಗೆ ಇದು ಪವಿತ್ರ ದುಡಿಮೆ. ಇದರಲ್ಲಿ ನಮಗೆ ಸುಖವಿದೆ, ಹಿತವಿದೆ, ಪುಣ್ಯವಿದೆ. ನಿಮ್ಮೆಲ್ಲರ ನೆರವಿನಿಂದ ನಾವು ನಮ್ಮ ಕಾರ್ಯ ಪೂರೈಸಬಯಸುತ್ತೇವೆ.

'ಕಲ್ಪನಾ' ಗ್ರಂಥಪ್ರಕಾಶನ
ಸಮಿತಿ, ಹುಬ್ಬಳ್ಳಿ.
ಜನವರಿ ೧೯೪೮

ಹಿರೇಮಲ್ಲೂರ ಈಶ್ವರನ್

# ನಲ್-ನುಡಿ

ನನ್ನ ಹಲವು ಸಣ್ಣ ಕತೆಗಳನ್ನು ಸಂಗ್ರಹಿಸಿ 'ಫಲಸಂಚಯ'ವೆಂದು ಪ್ರಕಟಿಸಿದೆ. ಕನ್ನಡಿಗರು ಈ ಫಲಗಳನ್ನು ಪ್ರೀತಿಯಿಂದ ಸ್ವೀಕರಿಸಬೇಕಾಗಿ ಬೇಡಿಕೆ.

ಪುಸ್ತಕದಲ್ಲಿಯ ಹಲವು ಕತೆಗಳಿಗೆ ಸಂದರ್ಭವನ್ನು ಸೂಚಿಸುವುದು ಅಗತ್ಯವಿದೆ. ಸರ್ವಜ್ಞನ ಜೀವನದ ಬಗ್ಗೆ ಹಲವು ತ್ರಿಪದಿಗಳಿವೆ. ಅವುಗಳ ಆಧಾರದಿಂದ ಸಮಾಜದಲ್ಲಿ ಬಾಲವಿಧವೆಯಾದ ಸರ್ವಜ್ಞನ ತಾಯಿ ಮಾಳಿಯು ಅನುಭವಿಸಿದ ಕಷ್ಟವನ್ನೂ, ಕಾಶಿ ವಿಶ್ವೇಶ್ವರನ ಅನುಗ್ರಹದಿಂದ ಜನ್ಮಪಡೆದ ಸರ್ವಜ್ಞನ ಮನೋಗತವನ್ನು ಸೂಚಿಸಿ 'ಫಲಸಂಚಯ'ವೆಂಬ ಕಾಲ್ಪನಿಕ ಸಣ್ಣ ಕತೆಯನ್ನು ರಚಿಸಿದೆ. ಪಾಶ್ಚಿಮಾತ್ಯರಲ್ಲಿ ಎಪ್ರಿಲ್ ಒಂದನೆಯ ದಿನಾಂಕ ಯಾರನ್ನಾದರೂ ಮೂರ್ಖರನ್ನಾಗಿ ಮಾಡಿ ಚೇಷ್ಟೆಮಾಡುವ ಪದ್ಧತಿಯುಂಟು. ಹೀಗೆ 'ಎಪ್ರಿಲ್ ಫೂಲ, ಮಾಡಿವ ವಿಧಾನವು ನಮ್ಮಲ್ಲಿಯ ಹಲವು ಮಿತ್ರರಲ್ಲಿಯೂ ಕಂಡು ಬರುವುದು. ಅದನ್ನೇ ಕುರಿತು 'ಎಪ್ರಿಲ್ ಒಂದು' ಎಂಬ ಕತೆಯಿದೆ. 'ಮೇಳದ ಗಾಯಕಿ' ಎಂಬ ಕತೆಯು ಚೆಕೋವ್ಹರು ಬರೆದ 'ಕೋರಸ್ ಗರ್ಲ' ಎಂಬ ಕತೆಯ ಸರಳಾನುರೂಪ.

ಜೀವನ, ಉಷಾ, ಸ್ವತಂತ್ರ ಈ ಪತ್ರಿಕೆಗಳಲ್ಲಿ ಈ ಸಂಗ್ರಹದಲ್ಲಿಯ ಹಲವು ಕತೆಗಳು ಪ್ರಕಟವಾಗಿವೆ. 'ಉದಯ'ವೆಂಬ ಕತೆಯನ್ನು ಅಖಿಲ ಭಾರತ ಆಕಾಶವಾಣಿ ಮುಂಬೈ ಕೇಂದ್ರದಲ್ಲಿ ೧೯೪೭ ಅಕ್ಟೋಬರ ತಿಂಗಳಲ್ಲಿ ಓದಿ ಪ್ರೋತ್ಸಾಹಿಸಿದ್ದಾರೆ. 'ಉದಯ' ಕತೆಯನ್ನು ಈ ಸಂಚಯದಲ್ಲಿ ಪ್ರಕಟಿಸಲು ಅನುಮತಿ ಕೊಟ್ಟ ಅಖಿಲ ಭಾರತ ಆಕಾಶವಾಣಿ ವ್ಯವಸ್ಥಾಪಕರಿಗೂ, ಕತೆಯನ್ನು ಬೆಳಕಿಗೆ ತಂದ ಪತ್ರಿಕಾ ಸಂಪಾದಕರಿಗೂ ನನ್ನ ಹೃತ್ಪೂರ್ವಕ ನೆನಿಕೆಗಳು.

ನನ್ನ ಕತೆಗಳನ್ನು ಬಹಳ ಕುತೂಹಲದಿಂದ ಓದಿ ಅವು ಸುಧಾರಿಸುವಂತೆ ಶ್ರೀ ರಂ. ಶ್ರೀ. ಮುಗಳಿ ಮತ್ತು ಶ್ರೀ ರಾ. ವೆಂ. ಕುಲಕರ್ಣಿಯವರು ನನಗೆ

ಸಲಹೆ ಕೊಟ್ಟಿದ್ದಾರೆ. ನನ್ನ ಪೂಜ್ಯ ಗುರುಗಳೂ, ಸಾಹಿತ್ಯದಲ್ಲಿ ಮಾರ್ಗದರ್ಶಕರೂ ಆದ ಶ್ರೀ. ವಿ. ಕೃ. ಗೋಕಾಕರು ಮಮತೆಯಿಂದ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಇವರೆಲ್ಲರಿಗೂ ನಾನು ಚಿರಋಣಿಯಾಗಿದ್ದೇನೆ.

ಶ್ರೀಯುತ ಪ್ರಲ್ಹಾದರಾವ ದೇಸಾಯಿ ಮೇಣೇಧಾಳ, ಪೋಲಿಸ ಗೌಡರ ಎಸ್. ಬಿ. ಧಾರವಾಡ, ಗುತ್ತಲ ವ್ಹಿ. ಎ. ಗದಗ, ಗುರುರಾಜ ಹುಯಿಲಗೋಳ ಧಾರವಾಡ ಇವರೆಲ್ಲರೂ ಅಪ್ರತ್ಯಕ್ಷವಾಗಿ ನನಗೆ ಅನೇಕ ರೀತಿಯಿಂದ ಪ್ರೋತ್ಸಾಹಿಸಿದ್ದಾರೆ. ಪ್ರೊ. ಹಿರೇಮಲ್ಲೂರ ಈಶ್ವರನ್ನರು ಕಲ್ಪನಾ ಸಾಹಿತ್ಯ ಮಾಲೆಯಲ್ಲಿ ಈ ಹೊತ್ತಿಗೆಯನ್ನು ಪ್ರಸಿದ್ಧಿಸಿದ್ದಾರೆ. ಇವರೆಲ್ಲರ ನೆರವನ್ನು ನಾನು ನೆನೆಯದಿರಲಾರೆ.

ಶ್ರೀ. ಬಿ. ಜಿ. ಅವಧಾನಿಯವರು ಈ ಗ್ರಂಥ ಪ್ರಕಾಶನದ ಭಾರವನ್ನು ಹೊತ್ತು ಬಹಳ ಉಪಕಾರ ಮಾಡಿದ್ದಾರೆ. ಹಿಂದಮಾತಾ ಮುದ್ರಣಾಲಯದ ವ್ಯವಸ್ಥಾಪಕರು ಪುಸ್ತಕವನ್ನು ಅಂದವಾಗಿ ವೇಳೆಗೆ ಸರಿಯಾಗಿ ಮುದ್ರಿಸಿ ಕೊಟ್ಟಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಲೇಖಕನ ಈ ನುಡಿಗಳ ಹಿಂದೆ ಅಪಾರವಾದ ಪ್ರೀತಿ ಹುದುಗಿದೆ. ಇವು ನಿಜವಾಗಿಯೂ ಮುಗ್ಧ ಣನು ಹೇಳುವಂತೆ "ಕಂಚಗಳಾಣೆ ನಲ್-ನುಡಿ".

೩೦-೧೨-೪೭
ಸಾಧನಕೇರಿ

— **ವರದರಾಜ ಹುಯಿಲಗೋಳ**

# ಮುನ್ನುಡಿ

ಮುನ್ನುಡಿಕಾರನದು ಶಬರಿಯು ಒಪ್ಪಿಸಿಕೊಂಡ ಕಾರ್ಯವಾಗಿದೆ. ಸಾಹಿತಿಗಳು ಅನೇಕ ಕೃತಿಗಳನ್ನು ನಿರ್ಮಿಸಿ ಸಮಾಜಪುರುಷನಿಗೆ ಅರ್ಪಿಸಲೆಂದು ಅಣಿಗೊಳ್ಳುತ್ತಾರೆ. ಮುನ್ನುಡಿಕಾರನು ಈ ಕೃತಿಯ ರುಚಿ ಹೀಗೆ, ಅದರ ಸವಿ ಹೀಗೆ ಎಂದು ತಾನು ಅನುಭವಿಸಿ ಸಮಾಜಾಭಿರಾಮನಿಗೆ ಅವನು ಪಡೆಯಲಿರುವ ಅನುಭವದ ಲಕ್ಷಣಗಳನ್ನು ಸೂಚಿಸುತ್ತಾನೆ. ಕೃತಿಯ ತಿರುಳು ಸಾಹಿತಿಯ ಪ್ರತಿಭೆಯನ್ನು ಅವಲಂಬಿಸಿದೆ. ಮುನ್ನುಡಿಕಾರನ ಮಾತಿನ ಹುರುಳು ಅವನ ಪ್ರಾಮಾಣಿಕತೆ-ರಸವಂತಿಕೆ-ಭಕ್ತಿಗಳ ಮೇಲಿಂದ ಸಿದ್ಧವಾಗುತ್ತದೆ. ಇದರಲ್ಲಿ ಅನಪೇಕ್ಷಣೀಯವಾವುದೂ ಇಲ್ಲ. ಅಲ್ಲದೆ ಶಬರಿಯ ಉದಾಹರಣೆಯನ್ನು ತೆಗೆದುಕೊಂಡರೂ ಸಾಹಿತ್ಯದಲ್ಲಿ ಕೃತಿಯ ಚೌರ್ಯ ಇಲ್ಲವೆ ಕಡವನ್ನು ಬಿಟ್ಟರೆ ಎಂಜಲದ ಪ್ರಶ್ನೆಯೇ ಇಲ್ಲ. ರಸಾನುಭವವು ಶೆಲ್ಲಿ ಹೇಳಿದ ಸೈಜಪ್ರೇಮದಂತೆ ಅನಂತವಾಗಿದೆ; ನಿತ್ಯನೂತನವಾಗಿದೆ. ಅದನ್ನು ಎಷ್ಟು ವಿಭಾಗಿಸಿದರೂ ಅದು ಕಡಿಮೆಯಾಗುವದಿಲ್ಲ. ಕ್ಷಣಕ್ಷಣಕ್ಕೆ ನವತೆಯನ್ನು ಹೊಂದುವ ಬದುಕದು.

ವರದರಾಜರು ವಿಲಿಂಗ್ಡನ್ ಕಾಲೇಜಿನಲ್ಲಿದ್ದಾಗ ವರುಣಕುಂಜದ ಸದಸ್ಯರಾಗಿದ್ದರು. ಹುಯಿಲಗೋಳ ಮನೆತನದಲ್ಲಿ ಸಾಹಿತ್ಯದ ಒಂದು ಪರಂಪರೆಯಿದೆ. ಹೀಗಾಗಿ ಸಾಹಿತ್ಯ ಯಾವಾಗಲೂ ಅವರ ಬೆನ್ನು ಬಿಟ್ಟಿಲ್ಲ. ಅವರು ಹೋದಲ್ಲೆಲ್ಲ ಅದು ಕಾಣಿಸಿಕೊಂಡಿದೆ. ಅಂದಮೇಲೆ ವರದರಾಜರಲ್ಲಿಯೂ ಸಾಹಿತ್ಯದ ಕಿಡಿ ಕಾಣಿಸಿಕೊಂಡಿದ್ದರೆ ಏನಾಶ್ಚರ್ಯ ?

ಮೊದಲಿನಿಂದಲೂ ವರದರಾಜರು ಸಣ್ಣ ಕತೆಯನ್ನೇ ತಮ್ಮ ಅಭಿವ್ಯಕ್ತಿಯ ಸಾಧನವನ್ನಾಗಿ ಮಾಡಿಕೊಂಡಿದ್ದಾರೆ. ವರುಣಕುಂಜದ ಮೇಲಾಟಗಳಲ್ಲಿ ಉಳಿದವರು ಕವಿತೆಗಳನ್ನು ಬರೆಯುತ್ತಿದ್ದರೆ ಇವರು ಕಿರುಕತೆಗಳನ್ನಾಗಲಿ 'ಹನಿ'ಗಳನ್ನಾಗಲಿ ಬರೆಯುತ್ತಿದ್ದರು. ಪ್ರೊ. ಧಾರವಾಡಕರರು ಹಾಗು ಶ್ರೀ. ಆರ್. ವಿ. ಕುಲಕರ್ಣಿಯವರು ವಿಮರ್ಶೆಯನ್ನು ವಿಶೇಷವಾಗಿ ಮೆಚ್ಚಿ

ದ್ದಾರೆ. ವಿ. ಜಿ. ಭಟ್ಟರು ವಿವಿಧ ರಂಗಗಳಲ್ಲಿ ವಿವಿಧ ವೇಷಗಳಲ್ಲಿ ಸುಳಿಯುತ್ತಿದ್ದಾರೆ. ಸು. ರಾ. ಎಕ್ಕುಂಡಿಯವರು ಕಥನಕಾವ್ಯಕ್ಕೆ ಒಂದು ಹೊಸ ಮೆರುಗನ್ನು ತಂದಿದ್ದಾರೆ. ವರದರಾಜರು ಸಣ್ಣಕತೆಯನ್ನೇ ನಂಬಿ ಈಗ ಫಲಗಳನ್ನು ಸಂಚಯಿಸಿದ್ದಾರೆ.

ಕತೆಗಾರನಿಗೆ ಇರಬೇಕಾದ ಜೀವನದೃಷ್ಟಿ ವರದರಾಜರ ಕೃತಿಗಳಲ್ಲಿದೆ ಯೆಂಬ ಮಾತು ಈ ಸಂಗ್ರಹದ ಉದ್ದಕ್ಕೂ ಎದ್ದು ಕಾಣುತ್ತದೆ. ಸರ್ವಜ್ಞನ ಕಥೆ ಯಲ್ಲಿಯಲ್ಪಕತೆ, ಬಾಡಿದ ಹೂ ಹಾಗು ಉದಯದಲ್ಲಿಯ ವಸ್ತುವಿನ ಆಧುನಿಕತೆ, ಗೋಪಿ, ಟೋಪಿ, ಮಾರುತಿ ಮೊದಲಾದವುಗಳಲ್ಲಿಯ ಸೂಕ್ಷ್ಮ ಸ್ವಭಾವ ಪರೀಕ್ಷಣೆ,— ಇವೆಲ್ಲ ಈ ದೃಷ್ಟಿಯ ವ್ಯಾಪಕತೆಯ ದ್ಯೋತಕವಾಗಿವೆ. ಅಲ್ಲದೆ ವರದರಾಜರ ಬರೆವಣಿಗೆಯಲ್ಲಿ ಒಂದು ಲಾಲಿತ್ಯವಿದೆ, ಸುಭಗತೆಯಿದೆ.

ಗೋಪಿ, ಆ ರಾಮು, ಟೋಪಿ ಮಾರುತಿ, ರಾಮಿ,— ಈ ಕತೆಗಳನ್ನು ಓದಿದವರಿಗೆ ವರದರಾಜರ ವಿಶಿಷ್ಟ ಜೀವನದೃಷ್ಟಿಯ ಒಲವು ಗೊತ್ತಾಗುತ್ತದೆ. ಬಡತನ ಹಾಗು ಸಮಾಜದ ಹೃದಯಶೂನ್ಯತೆಯ ಮೂಲಕ ಒಳ್ಳೆಯ ಜೀವಗಳು ಪಡುವ ಕಷ್ಟ, ಅವುಗಳ ಒಳ್ಳೆಯತನ ಸಹ ಲೋಪವಾಗುವ ಸಂಭವ, ಗುಣ ಹಾಗು ಪರಿಸ್ಥಿತಿಯ ನಡುವಿನ ತಿಕ್ಕಾಟ,— ಇವುಗಳನ್ನು ವರದರಾಜರು ಮಾರ್ಮಿಕವಾಗಿ ಚಿತ್ರಿಸಬಲ್ಲರು. ಕಲಾವಂತಿಕೆಯೂ ಅಲ್ಲಲ್ಲಿ ಅವರ ಚಿತ್ರಣಕ್ಕೆ ಕಳೆಕೊಡುತ್ತದೆ.

ಸಣ್ಣಕತೆಯು ಗಾತ್ರದಲ್ಲಿ ಸಣ್ಣದಾದರೂ ತಂತ್ರದಲ್ಲಿ ದೊಡ್ಡ ವಿಷಯವಾಗಿದೆ. ಅನಂತತೆಯನ್ನು ಬೊಗಸೆಯಲ್ಲಿ ಸೆರೆಹಿಡಿಯುವಕಲೆಯಿದು,— ಸಣ್ಣಕತೆಯ ಕಲೆ. ವರದರಾಜರ ಕತೆಗಾರಿಕೆಯಲ್ಲಿ ಮಿತವ್ಯಯವೂ ಸಾಂದ್ರತೆಯೂ ಇನ್ನೂ ಹೆಚ್ಚಬೇಕು, ಕತೆಗಳ ಮುಕ್ತಾಯದಲ್ಲಿ ಹೆಚ್ಚಿನ ಸಿದ್ಧಿಯ ಸಂಪಾದನೆಯಾಗಬೇಕು. ಅವರ ಅನುಭವವು ಸ್ಫುಟವಾಗುತ್ತ ಹೋದಂತೆ ಇದೂ ಸಾಧಿಸುವದರಲ್ಲಿ ಸಂಶಯವಿಲ್ಲ.

ಎಮ್.ಎನ್.ಕಾಲೇಜ್.
ವೀಸನಗರ ( ಉತ್ತರ ಗುಜರಾಥ )
೨೭-೧೨-೧೯೪೭

**ವಿ. ಕೃ. ಗೋಕಾಕ.**

# ಅರ್ಪಣೆ

## ರಂ. ಶ್ರೀ. ಮುಗಳಿಯವರಿಗೆ—

ಪ್ರಿಯ ತೋಟಿಗ,

ನನ್ನ ಜೀವನದ ಮರವು ಹೆಮ್ಮರವಾಗಿ ಬೆಳೆಯುವಂತೆ ನೀರುಣಿಸಿದೆ. ಬಿರುಗಾಳಿಯಲ್ಲಿಯೂ ಅಲುಗದಂತೆ ನಿಲ್ಲಿಸುವ ಧೈರ್ಯ ತೋರಿಸಿದೆ. ಇಗೋ, ನಿನ್ನ ಅಂಗೈಯಿಂದ ರಕ್ಷಿಸಿದ ಗಿಡದಲ್ಲಿ ಫಲಗಳಿವೆ. ಅವುಗಳನ್ನು ನಿನಗೆ ಮಮತೆಯಿಂದ ಅರ್ಪಿಸಿದ್ದೇನೆ. ಸ್ವೀಕರಿಸು.

ಸಾಧನಕೇರಿ
೩೦–೧೨–೪೭

ನಿನ್ನವನೆ
**ವರದರಾಜ ಹುಯಿಲಗೋಳ**

# ಒಳಪಿಡಿ


| | |
|---|---|
| ಗೋಪಿ | ೧ |
| ಆ ರಾಮು ! | ೯ |
| ಟೋಪಿ ಮಾರುತಿ | ೧೫ |
| ರಾಮಿ | ೨೫ |
| ಕರೀಮನ ಸಿಟೀಲು | ೩೨ |
| ಎಪ್ರಿಲ್ ಒಂದು | ೪೧ |
| ಮೇಳದ ಗಾಯಕಿ | ೫೦ |
| ಉದಯ | ೫೯ |
| ಇಬ್ಬರು ಭಿಕ್ಷುಕರು | ೬೦ |
| ಬಾಡಿದ ಹೂ | ೬೯ |
| ಫಲಸಂಚಯ | ೯೫ |

# ಗೋಪಿ

ವೆಂಕಪ್ಪನ ಜೊತೆಗೆ ಒಂದು ಆಕಳು ಇದ್ದೇ ಇದೆ. ಅವನ ಮನೆಯ ಮುಂದೆ ಯಾವಾಗಲೂ ಅದು ಜೋಲುಮೋರೆ ಹಾಕಿಕೊಂಡು ನಿಂತೇ ನಿಂತಿರುತ್ತದೆ. ದಾರಿಯಲ್ಲಿ ಹೋಗುತ್ತಿದ್ದವರನ್ನು ಮಿಕಿ ಮಿಕಿ ಕಣ್ಣು ಬಿಟ್ಟು ನೋಡುತ್ತದೆ. ಹತ್ತಿರದಲ್ಲಿಯೆ ಇದ್ದ ವೃಂದಾವನದ ತುಳಸಿಯನ್ನು ತಿನ್ನಲಿಕ್ಕೆ ನಾಲಿಗೆ ಚಾಚುತ್ತದೆ. ಆದರೆ ಅದು ಸರಿದಾಡಲಾರದು. ವೆಂಕಪ್ಪನು ಅದನ್ನು ಹಗ್ಗದಿಂದ ಕಟ್ಟಿಹಾಕಿದ್ದಾನೆ.

ಅದನ್ನು ಅವನು ಸ್ವೇಚ್ಛಾಸಂಚಾರಕ್ಕೆ ಹೊರಗೆ ಬಿಡುವುದೇ ಕಡಿಮೆ. ಯಾವ ಗವಳಿಯೂ ಅದನ್ನು ತನ್ನ ಆಕಳುಗಳ ಸಂಗಡ ಕರೆದುಕೊಂಡು ಹೋಗುವದಿಲ್ಲ. ಸ್ವತಃ ವೆಂಕಪ್ಪನಾದರೂ ಗವಳಿಗನಾಗಿ ಅದನ್ನು ಹುಲ್ಲು ಗದ್ದೆಗೆ ಒಯ್ಯುವದಿಲ್ಲ. ಕೆಲಸದಿಂದ ಬರುವ ಮುಂದೆ ತಾನೇ ಅಲ್ಲಿ ಇಲ್ಲಿ ತಿರುಗಾಡಿ ಹುಲ್ಲು ಹೊರೆಯನ್ನು ಹೊತ್ತುಕೊಂಡು ಬರುತ್ತಾನೆ. ಅವನು ಬರುವ ದಾರಿಯನ್ನೆ ಆಕಳು ಕಾಯುತ್ತಿರುತ್ತದೆ. ಹುಲ್ಲೆಲ್ಲ ಅದರ ಪಾಲಾಗಬೇಕು. ಇಲ್ಲವಾದರೆ ಅವನನ್ನು ಹರಕೊಂಡು ತಿಂಬುವ ಹಾಗೆ ನೋಡುತ್ತದೆ. ಆದರೆ ಅದು ಸಮಾಧಾನಿ. ವೆಂಕಪ್ಪನು ಕೊಟ್ಟಷ್ಟರಲ್ಲಿ ತನ್ನ ಹಸಿವೆಯನ್ನು ತೀರಿಸಿಕೊಳ್ಳುತ್ತದೆ. ಅವನೂ ಸಹ ನಿಪುಣನಾಗಿ ತಂದ ಹುಲ್ಲಿನಲ್ಲಿ ಸಂಜೆಗೂ ಇಡುತ್ತಾನೆ.

ಓಣಿಯಲ್ಲಿಯ ಮನೆಯವರೆ ಪಲ್ಲೆಯ ಕಡ್ಡಿಗಳನ್ನು ಅಥವಾ ಮತ್ತೇನಾದರೂ ತಿನಸುಗಳನ್ನು ತಿಪ್ಪೆಯಲ್ಲಿ ಚೆಲ್ಲುವದನ್ನು ಬಿಟ್ಟು ಆಕಳದ ಮುಂದೆ ತಂದು ಒಗೆಯುತ್ತಾರೆ. ಆ ಓಣಿಯಲ್ಲಿರುವ ಮನೆಗಳಾದರೂ ಎಷ್ಟು ? ಹನ್ನೆರಡು ಅಥವಾ ಹನಿಮೂರು. ಅಲ್ಲಿರುವವರೆಲ್ಲಲೂ ಸಾಧಾರಣವಾಗಿ ಕೂಲಿ ಕುಂಬಳಿಯಾಗಲಿ ಅಥವಾ ಸಾವುಕಾರರ ಮನೆಗೆಲಸವಾಗಲಿ ಮಾಡಿ ಹೊಟ್ಟೆ

ತುಂಬಿಕೊಳ್ಳುವವರು. ಸದ್ಯದ ಆರ್ಥಿಕ ಅವನತಿಯ ಕಾಲದಲ್ಲಿ ತಮ್ಮ ಹಸಿವೆಯನ್ನೇ ಅಡಗಿಸಲು ಅಶಕ್ಯರಾದವರು. ಆ ಬಡ ಪ್ರಾಣಿಗೆ ಏನನ್ನು ತಂದು ಹಾಕುವರು? ಸನಾತನಿಗಳಾದ ತುಳಸಮ್ಮನವರು ಯಾವಾಗಲೊ ಆ ಸಂದಿಯಲ್ಲಿ ಹಾದು ಹೋಗುವಾಗ್ಗೆ ಆರಿಬಡುತ್ತಿರುವ ಆ ಆಕಳನ್ನು ನೋಡಿದ್ದರಂತೆ. ಅಂದಿನಿಂದ ದಿನಾಲು ಹತ್ತಿಯ ಕಾಳನ್ನಾಗಲಿ ಅಥವಾ ಹಿಡಿ ಅಕ್ಕಿಯನ್ನಾಗಲಿ ಕೈಯಲ್ಲಿ ಹಿಡಿದುಕೊಂಡು ಬಂದು ಅವಳ ಮುಂದೆ ಇಡುತ್ತಿದ್ದರು; ಆಕಳಿನ ಹಣೆಯ ಮೇಲೆ ಕುಂಕುಮವನ್ನು ಏರಿಸಿ, ಅದರ ಬಾಲದಚೌರಿಯಿಂದ ಮುಖದ ಮೇಲಿದ್ದ ಪಾಪದ ಧೂಳಿಯನ್ನು ಹಾರಿಸಿ ಕೊಳ್ಳುತ್ತಿದ್ದರು. ಆದರೆ ಹೊಟ್ಟೆತುಂಬ ಕೂಳಿಲ್ಲದ್ದರಿಂದ ಆ ಮೂಕ ಪ್ರಾಣಿಯು ದಿನಾಲು ಕ್ಷೀಣವಾಗುತ್ತ ನಡೆದಿತ್ತು. ಅವರ ಮಾಂಸವೆಲ್ಲ ಕರಗಿ ಎಲುಬಿನ ಮೈಯಷ್ಟೆ ಪ್ರದರ್ಶನವಾಗಿತ್ತು. ಅವನ್ನು ಕಂಡು ತುಳಸಮ್ಮನವರು ಬಹಳೇ ಮರುಗುತ್ತಿದ್ದರು. ಅವರ ರಾಯರ ಮನೆಯಲ್ಲಿ ಈ ಪ್ರಾಣಿಯ ಸುದ್ದಿಯನ್ನು ಹರಡಿದ್ದರು. ರಾಯರು ಸ್ವತಃ ವೆಂಕಪ್ಪನ ಮನೆಗೆ ಬಂದು ಆಕಳನ್ನು ಸುಮ್ಮನೆ ಕೊಲ್ಲುವದಕ್ಕಿಂತ ತಮ್ಮ ಮನೆಯಲ್ಲಿ ತಂದು ಬಿಡಲು ಪರಿಪರಿಯಾಗಿ ಬೇಡಿ ಕೊಂಡಿದ್ದರು. ಅವನ ಕೈಯನ್ನು ಚೆನ್ನಾಗಿ ಬೆಚ್ಚಗೆಮಾಡುವ ಯೋಜನೆ ಯನ್ನೂ ಕೈಕೊಂಡಿದ್ದರು. ಆದರೆ ವೆಂಕಪ್ಪನ ಮನಸ್ಸು ಅದಕ್ಕೆ ಹಣಿಯಲಿಲ್ಲ. ಆಕಳನ್ನು ನಿರರ್ಥವಾಗಿ ಸಾಯಗೊಡಬಾರದೆಂಬ ತತ್ವಕ್ಕೆ ರಾಯರು ಹೇಗೆ ಹೆಣಗಾಡಿದರೂ ಹಾಗೆಯೇ ವೆಂಕಪ್ಪನೂ ಅದೇ ತತ್ವವನ್ನು ಮನಗಂಡು ಆಕ ಳನ್ನು ಬಿಟ್ಟುಕೊಡಲು ಒಪ್ಪಲಿಲ್ಲ.

ಅದೆಷ್ಟು ವ್ಯಥವಾದ ನಿಷ್ಠೆಯುವು! ಆಕಳಿಂದೇನಾದರೂ ವೆಂಕಪ್ಪನಿಗೆ ಉಪಯೋಗವಿತ್ತೆ? ದಿನಾಲು ಒಂದು ತಂಬಿಗೆ ಹಾಲು ಕೊಟ್ಟು ಅವನನ್ನು ಸಂರಕ್ಷಿಸುವದೇ? ಯಾವುದೂ ಇಲ್ಲ. ಆದರೂ ಈ ಆಕಳನ್ನು ಅವನು ದೇವತೆಯೆಂದು ನಂಬಿದ್ದಾನೆ. ಇಂಥ ದೇವತೆಯನ್ನು ಯಾರಿಗಾದರೂ ಸ್ವಾಧೀನಮಾಡಬೇಕಾದರೆ ಅದರ ಮರ್ದನವು ಮತ್ತೆಲ್ಲಿ ಕಣ್ತೆರೆಯುವದೆಂಬ ಭಯದಿಂದ ಅವನೆದೆಯಲ್ಲಿ ಭೂಕಂಪವಾಗುತ್ತದೆ. ನೆರೆಹೊರೆಯುವರೆಲ್ಲರೂ ದಿನಾಲು ನೋಡುತ್ತಿದ್ದಾರೆ. ಪಾಪವನ್ನು ಕಟ್ಟಿಕೊಳ್ಳದೆ ಅದನ್ನು ಬಿಟ್ಟು ಬಿಡಲು ಎಲ್ಲರೂ ಉಪದೇಶಿಸುತ್ತಾರೆ; ಹಾಗೆ ಮಾಡದಿರುವ ಅವನನ್ನು ಕಂಡು

‘ ಛೀ ’ ಹಾಕುತ್ತಿದ್ದಾರೆ. ವೆಂಕಪ್ಪನು ಯಾವುದನ್ನೂ ಮನಸ್ಸಿಗೆ ಹಚ್ಚಿಕೊಂಡಿಲ್ಲ. ಯಾರ ಮಾತನ್ನೂ ಕೇಳಿಲ್ಲ. ಅದನ್ನು ಸಂರಕ್ಷಿಸುವುದು ತನ್ನ ಕರ್ತವ್ಯವೆಂದೇ ಹೇಳುತ್ತಾನೆ. ಅದು ತನ್ನ ಸರ್ವಸ್ವ, ತನ್ನ ಜೀವದ ಸೊತ್ತು ಎನ್ನುತ್ತಾರೆ.

ಬೆಳ್ಳಿಯ ಚಿಕ್ಕೆಯು ಜಗತ್ತಿಗೆ ಉಷೆಯ ಬರುವನ್ನು ಹೇಳಿ ಮೂಡಣದಲ್ಲಿ ನರ್ತಿಸುವ ಹೊತ್ತಿನಲ್ಲಿ ವೆಂಕಪ್ಪನು ತನ್ನ ಮೂರಂಕಣದ ಮನೆಯ ಚಿಕ್ಕ ಬಾಗಿಲವನ್ನು ಮೆಲ್ಲಗೆ ತೆಗೆದು ಹೊರಗೆ ಬರುತ್ತಾನೆ. ಮೊದಲು ಆಕಳ ದರ್ಶನವನ್ನು ತೆಗೆದುಕೊಳ್ಳುತ್ತಾನೆ. ಮಮತೆಯಿಂದ ಅದಕ್ಕೆ ‘ ಗೋಪೀ.... ಗೋಪಿ ’ ಎಂದು ಕರೆಯುತ್ತಾನೆ. ‘ ನೆಟ್ಟಗಿದ್ದೀಯಾ ? ’ ಎಂದು ಕೇಳುತ್ತಾನೆ. ಅದು ಗೋಣು ಹಾಕುತ್ತದೆ. ಗೋಪಿಯ ಮೈಮೇಲೆಲ್ಲ ಕೈಯಾಡಿಸಿ ಅದಕ್ಕೆ ತನ್ನ ವಂದನೆಗಳನ್ನು ಅರ್ಪಿಸುತ್ತಾನೆ. ಆ ಮೇಲೆ ಅವನ ನಿತ್ಯ ಕರ್ಮಗಳಿಗೆ ಪ್ರಾರಂಭ. ಮತ್ತೆ ತನ್ನ ಕೆಲಸದಿಂದ ಮರಳಿದಾಗ್ಗೆ ಗೋಪಿಯ ದರ್ಶನವು ಮೊದಲಾಗಬೇಕು. ಹೊರಗೆ ಹೋಗುವ ಮುಂದೆ ಅದನ್ನು ಮಾತನಾಡಿಸಿ ಹೋಗಬೇಕು.

ವೆಂಕಪ್ಪನ ಈ ವೃತ್ತಿಯನ್ನು ಕಂಡು ಮನೆಯಲ್ಲಿಯ ಹೆಂಡತಿಯೂ ಸಹ ನೊಂದುಕೊಂಡಿದ್ದಾಳೆ. ಎಷ್ಟೋ ಸಲ ಸಿಟ್ಟಿಗೆದ್ದು ಗಂಡನ ಕೂಡ ವಾಗ್ವಾದದ ಯುದ್ಧವನ್ನು ಹೂಡಿದ್ದಾಳೆ. ಆಕೆಯ ಸಂತತಿ ಎರಡು ವರ್ಷಕ್ಕೊಮ್ಮೆ. ವರ್ಷ ವರ್ಷ ಹೆಣ್ಣು ಮಕ್ಕಳು ಗಂಡು ಮಕ್ಕಳು ಬೆಳೆಯುತ್ತಲಿದ್ದಾರೆ. ಆರು ಮಕ್ಕಳ ತಾಯಿಯಾಗಿದ್ದಾಳೆ. ಮಕ್ಕಳ ಬೇನೆ ಬೇಸರಿಕೆ, ಅವರ ಅರಿವೆ ಅಂಚಡಿ, ಇವುಗಳ ಮಾತುಕತೆಯಲ್ಲಿಯೆ ಅವಳ ವಿಚಾರ ಹರಿದಾಡುತ್ತಿದೆ. ‘ ಚೊಚ್ಚಲ ಮಗಳಾದ ಚಂಪೆಗೆ ನೆರೆಯುವ ವಯಸ್ಸು ಸಮೀಪಿಸಿದೆ. ಅವಳ ಮದುವೆ. ಉಳಿದವರಿಗೆ ಶಾಸ್ತ್ರದಲ್ಲಿ ಹೇಳಿದ ಸಮಾರಂಭಗಳು. ಇದಕ್ಕೆಲ್ಲ ದುಡ್ಡು ಬೇಡವೆ ? ’ ಇಂಥ ವಿಚಾರಗಳಿಂದ ಅವಳ ಮನಸ್ಸಿನಲ್ಲಿ ತಾಕಲಾಟ ಎದ್ದಿದೆ. ಗಂಡನು ಏನೂ ದುಡ್ಡು ಕೂಡಿಸುವ ಹಾಗಿಲ್ಲ. ತನ್ನ ಕೂಲಿಯಲ್ಲಿ ಉಳಿದ ಹಣವನ್ನು ಶಕ್ಯವಾದರೆ ಗೋಪಿಯ ಹೊಟ್ಟೆಗಾಗಿಯೆ ಉಪಯೋಗಿಸುತ್ತಾನೆ. ಮನೆಯಲ್ಲಿಯ ಅಡಚಣಿಯ ಬಗ್ಗೆ ಹೆಂಡತಿಯು ಪ್ರಶ್ನೆ ಎತ್ತಿದಾಗ್ಗೆ, ಹೆಂಡತಿಯ ಮೈಮೇಲಿಟ್ಟ ಹಲವು ವಸ್ತುಗಳನ್ನು ಮಾರಿ ಸಮಾರಂಭಗಳನ್ನು

ನೆರವೇರಿಸೋಣ ಎನ್ನುತ್ತಾನೆ. ಈ ಮಾತುಗಳನ್ನು ಕೇಳಿಯಂತೂ ಹೆಂಡತಿಯ ಸಿಟ್ಟು ಉಕ್ಕುತ್ತದೆ. ಕೆಲಸವನ್ನು ಮಾಡುತ್ತ ದೊಡ್ಡ ಜಗಳವನ್ನೆ ಹೂಡುತ್ತಾಳೆ. ಏನಾದರೂ ಅವು ಆಕೆಯ ವಸ್ತುಗಳು! ಮನೆಯಲ್ಲಿಯ ಉಳಿದ ಹುಡುಗರು ಇವರಿಬ್ಬರನ್ನು ಶೂನ್ಯ ದೃಷ್ಟಿಯಿಂದ ಮಿಕಿಮಿಕಿ ನೋಡುತ್ತ ನಿಲ್ಲುತ್ತಾರೆ.

ಬೇಟೆಗಾರರ ಸಪ್ಪಳವನ್ನು ಕೇಳಿ ಚಿಗರೆಗಳು ನಿಲ್ಲುವ ಹಾಗೆ ಬಾಗಿಲ ಮುಂದೆ ವಾಸವಾಗಿದ್ದ ಗೋಪಿಯು ಮಾತ್ರ ಕಿವಿಗಳನ್ನು ನಿಮಿರಿಸಿ ನಿಲ್ಲುತ್ತದೆ ಧಡಪಡಿಸುತ್ತದೆ. ಮಾತನಾಡುವದನ್ನು ಬಿಟ್ಟು ವೆಂಕಪ್ಪನು ಹೊರಗೆ ಓಡಿ ಬರುತ್ತಾನೆ. 'ಗೋಪೀ. ಗೋಪಿ. .' ಎಂದು ಒದರುತ್ತಾನೆ. ಅವನ ಧ್ವನಿಯಲ್ಲಿ ಅವನ ಅಂತಃಕರಣವೆ ಮೂರ್ತಿವೆತ್ತಂತೆ ತೋರುತ್ತದೆ. ಅದರ ಮೊಗದ ಮೇಲೆ ತನ್ನ ಮೊಗವನ್ನು ಇಡುತ್ತಾನೆ. ತನ್ನ ಕಣ್ಣೀರುಗಳನ್ನು ಒರಸುತ್ತಾನೆ. ತನ್ನ ಹೃದಯದ ದುಃಖವನ್ನು ಗೋಪಿಯು ಕಳೆಯುವಳೆಂದು ಆವನು ಸಂಪೂರ್ಣವಾಗಿ ನಂಬಿದ್ದಾನೆ. ತನ್ನ ಉತ್ಸಾಹದ ಹೆಚ್ಚಳವೆಲ್ಲ ಗೋಪಿಯು ಕೊಟ್ಟದ್ದೆ ಎಂದು ವಿಶ್ವಾಸಪೂರ್ಣವಾಗಿ ಹೇಳುತ್ತಾನೆ. ವರ್ಷಕೊಮ್ಮೆಯಾದರೂ ತುಳಜಾಪೂರದ ಯಾತ್ರೆಯನ್ನು ಅವನು ಕಾಲ್ನಡಿಗೆಯಿಂದ ಮಾಡುವನು. ಯಾತ್ರೆಯ ಜೊತೆಗಾರನಾಗಿ ಗೋಪಿಯು ಅವನ ಸಂಗಡ ಇರಬೇಕು. ಯಾತ್ರೆಯಲ್ಲಿ ಕಂದಿ ಬಣ್ಣದ ನಿಶಾನೆಗೆ ಯಾವ ಸ್ಥಾನವೊ ಅದೆ ಸ್ಥಾನ ಗೋಪಿಗೆ. ದಾರಿಯಲ್ಲಿಯ ಶ್ರಮವನ್ನೆಲ್ಲ ಗೋಪಿಯ ಮುಖವನ್ನು ನೋಡಿ, ನಮಸ್ಕಾರ ಮಾಡಿ, ಅವನು ಪರಿಹಾರ ಮಾಡಿಕೊಳ್ಳುತ್ತಿದ್ದನು. ಈ ಯಾತ್ರೆಯಲ್ಲಿ ಮಾತ್ರ ಗೋಪಿಗೆ ಬೇಕಾದಷ್ಟು ಎಳೆ ಹುಲ್ಲು ಸಿಗುತ್ತಿದ್ದಿತಾದ್ದರಿಂದ ತುಸು ಒಳ್ಳೆ ಮೈಕಟ್ಟಿನಿಂದ ಅದು ವೆಂಕಪ್ಪನ ಮನೆಯನ್ನು ಕಾಣುತ್ತಿತ್ತು.

ಗೋಪಿಯು ವೆಂಕಪ್ಪನ ಮನೆಗೆ ಬಂದು ಮೂರು ವರ್ಷವಾಗಿ ಹೋಯಿತು. ಅದರ ಬಾಳು ಹಾಗೆಯೆ ಸಾಗಿದೆ. ಈ ವರುಷ ಏನೂ ಮಳೆಯಿಲ್ಲ. ಯಾವಾಗಾದರೊಮ್ಮೆ ಮೇಘರಾಜನು ತನ್ನ ದಂಡನ್ನು ತೆಗೆದುಕೊಂಡು ಬರಲು, ಮಾರುತನು ಬಿರ್ರನೆ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿ ಆ ದಂಡನ್ನು ಚದುರಿಸಿಬಿಡುತ್ತಿದ್ದನು. ಸತತವೂ ಸ್ವಚ್ಛವಾದ ನೀಲಿಮೆಯ ಬಾನೇ ಕಾಣುತ್ತಿತ್ತು. ತನಗೆ ಯಾರೂ ನೀರೆರೆಯಲಿಲ್ಲೆಂದು ಭೂದೇವಿ

ಗೋಳಿಡುತ್ತಿದ್ದಳು. ವೆಂಕಪ್ಪನು ತನ್ನ ಕೆಲಸವನ್ನು ಮುಗಿಯಿಸಿಕೊಂಡು ರಣ ರಣ ಬಿಸಿಲಿನಲ್ಲಿ ಊರ ಹೊರಗೆ ಎಷ್ಟು ತಿರುಗಾಡಿದರೂ ಹುಲ್ಲು ಸಿಗುತ್ತಿರಲಿಲ್ಲ ಬೇಸಿಗೆಯ ದಿನಗಳು ಬಂದವು. ವೆಂಕಪ್ಪನ ಕಳವಳವು ಇಮ್ಮಡಿಯಾಯಿತು. ಗೋಪಿಯ ಸಂಕಟವೊಂದು, ಮನೆಯಲ್ಲಿ ಸಂಸಾರದ ಕಿಟಿಕಿಟಿ ಇನ್ನೊಂದು. ಗೋಪಿಯು ಮತ್ತಿಷ್ಟು ಬಡಕಾಗತೊಡಗಿತು. ಮನೆಯಲ್ಲಿಯ ಗೋಳು ಹೆಚ್ಚಿತು. ಎಲ್ಲಿಯಾದರೂ ಭಿಕ್ಷೆ ಬೇಡಿ ಹುಲ್ಲು ಹೊರೆಯನ್ನು ಕೊಳ್ಳಬೇಕೆಂದರೂ ಹುಲ್ಲಿನ ಒಣಮುಖವಾದರೂ ಪೇಟೆಯಲ್ಲಿ ಕಾಣುತ್ತಿರಲಿಲ್ಲ. ವೆಂಕಪ್ಪನಿಗೆ ಭಯಂಕರ ನಿರಾಶೆ!

ಬೇಸಿಗೆಯ ಒಂದು ಮಧ್ಯಾಹ್ನ. ಎಲ್ಲಿಯೋ ದೂರ ದೂರ ತಿರುಗಾಡಿ, ಮೊಗವೆಲ್ಲ ಕಪ್ಪಿಟ್ಟುಕೊಂಡು ಒಂದು ಸಣ್ಣ ಹುಲ್ಲಿನ ಹೊರೆಯನ್ನು ಒಡಿದುಕೊಂಡು ವೆಂಕಪ್ಪನು ಮನೆಯ ದಾರಿಯನ್ನು ಹಿಡಿದಿದ್ದ; ದಾರಿಯನ್ನು ನಡೆನಡೆದು ಸೋತುಬಿಟ್ಟಿದ್ದ; ಮೈಯಲ್ಲಿ ಬೆವರು ಹರಿಯುತ್ತಿತ್ತು. ಸಾಗುತ್ತಿದ್ದ ಹಾಗೆಯೆ ಗೋಪಿಯನ್ನು ಕಂಡ. ಅವನಿಗೆ ಮಹದಾಶ್ಚರ್ಯವಾಯಿತು. ಅವನೆಂದಿಗೂ ಅವನ್ನು ಹಾಗೆ ಹೊರಬಿಟ್ಟಿರಲಿಲ್ಲ. ಕಣ್ಣೆದುರು ನೋಡುತ್ತಾನೆ. ಅದರ ಸಂಗಡ ತನ್ನ ಮಗನಿದ್ದಾನೆ, ಅವನು ನಗುತ್ತಿದ್ದಾನೆ.

ಅಪ್ಪನನ್ನು ನೋಡುವುದೊಂದೆ ತಡ. ಮಗನು "ಅಪ್ಪಾ.. ಅಪ್ಪಾ.. ಅವ್ವಗ ಇಷ್ಟಿಷ್ಟು ದುಡ್ಡು ಬರತಾವ.. ....ತುಳಸಮ್ಮನೋರು ಕೊಡತಾರ.... ಅಕ್ಕನ ಲಗ್ನ ಆಗತದ........" ಎಂದು ಏನೇನೋ ಕುಣಿಕುಣಿದು ಹೇಳಿದನು. ಮೂರು ನಾಲ್ಕು ದಿನಗಳಿಂದ ಸಾಧಾರಣವಾಗಿ ಸಹ ಕೂಳಿಲ್ಲದ ಗೋಪಿಯು ಹೇಗೊ ಅಷ್ಟು ದಾರಿಯನ್ನು ನಡೆದು ಬಂದಿದ್ದಿತು. ಇನ್ನು ಕೆಲವು ಹೆಜ್ಜೆಗಳನ್ನು ಸಾಗಿದ್ದರೆ ರಾಯರ ಮನೆಯು ಬಂದೇ ಬಿಡುತ್ತಿತ್ತು. ವೆಂಕಪ್ಪನ ಹೆಂಡತಿಯ ಆಶೆಗಳೆಲ್ಲವೂ ಕೊನೆಗಾಣುತ್ತಿದ್ದವು. ಆದರೆ ವೆಂಕಪ್ಪನು ಮಗನ ಮಾತನ್ನೇನೂ ಕೇಳಲಿಲ್ಲ. ಅವನಿಗೆ ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಆ ಹುಡುಗ ಪೆಚ್ಚಾಗಿ ನಿಂತಿತು. ತನ್ನನ್ನೆ ಹುಚ್ಚಾಗಿ ನೋಡುತ್ತಿದ್ದ ಗೋಪಿಯನ್ನು ವೆಂಕಪ್ಪನು ಮೈದಡವಿ ತಿರುಗಿ ಮನೆಯ ದಾರಿಯನ್ನು ಹಿಡಿಯಿಸಿದನು. ಯಾವುದೂ ಮಾತನಾಡದೆ ಮಗನು ತಂದೆಯನ್ನು ಹಿಂಬಾಲಿಸಿದನು.

ಅಂದು ಇಡೀ ದಿನವೆಲ್ಲ ವೆಂಕಪ್ಪನಿಗೆ ವಿರಾಮವಿಲ್ಲ. ನಿಂತನಿಂತಲ್ಲಿ ಕುಳಿಕುಳಿತಲ್ಲಿ ಮನಸ್ಸು ಏನೊ ವಿಚಾರಿಸುತ್ತಿದೆ, ಉಸಿರ್ಗರೆಯುತ್ತಿದೆ ಮೊದಲೆ ಮೈವಣುವಿನಲ್ಲಿ ಮನಸ್ಸಿನ ಸಂತಾಪವೂ ಬೇರೆ. ನಡುನಡುವೆ ಹುಚ್ಚು ಹಿಡಿದಂತೆಯೂ ಮಾಡುತ್ತಿದ್ದಾನೆ. ಮಡ್ಡು ಬರುವುದನ್ನು ತಪ್ಪಿಸಿದನೆಂದು ಹೆಂಡತಿಯು ವೆಂಕಪ್ಪನನ್ನು ದೂರುತ್ತಿದ್ದಾಳೆ. ರಾಯರ ಮನೆಗೆಲಸವನ್ನು ಬಿಟ್ಟು, ಸ್ವಸ್ಥವಾಗಿ ಮನೆಯಲ್ಲಿ ಕುಳಿತುಬಿಡುವೆನೆಂದೂ ಆ ಮೇಲೆ ಸಂಸಾರದ ಚಕ್ರ ಹೇಗೆ ಸಾಗುವುದೋ ನೋಡುವೆನೆಂದೂ ಬೆದರಿಕೆಯನ್ನು ಹಾಕುತ್ತಿದ್ದಾಳೆ. ವೆಂಕಪ್ಪನು ಏನೂ ಮಾತನಾಡಲಿಲ್ಲ. ಅಂದು ಬೇಗನೆ ಹಾಸಿಗೆಯನ್ನು ಹಾಸಿ ಮಲಗಿಕೊಂಡುಬಿಟ್ಟ.

ಮಧ್ಯರಾತ್ರಿಯ ಕಾಲವು ಮಿಕ್ಕಿ ಹೋಗಿದೆ. ಮನೆಯ ಬಾಗಿಲವು ಮೆಲ್ಲನೆ ತೆರೆಯಿತು. ಒಂದು ನಿಮಿಷದಲ್ಲಿ ಬಾಗಿಲವು ಮತ್ತೆ ತನ್ನ ಸ್ಥಾನವನ್ನು ಆಕ್ರಮಿಸಿತು. ಆ ರಾತ್ರಿಯ ಮಂದವಾದ ಬೆಳಕಿನಲ್ಲಿ ವೆಂಕಪ್ಪನು ಗೋಪಿಯನ್ನು ತನ್ನ ಸಂಗಡ ಎಳೆದುಕೊಂಡು ಹೊರಟನು. ಓಣಿಯಲ್ಲೆಲ್ಲ ಜನರು ಸ್ತಬ್ಧರಾಗಿ ಮಲಗಿಕೊಂಡುಬಿಟ್ಟಿದ್ದಾರೆ. ಹೋದಹೋದಲ್ಲೆಲ್ಲ ಕತ್ತಲೆಯನ್ನು ತುಳಿಯುತ್ತ ಹೊರಟ ಗೋಪಿಯ ಕಾಲ ಸಪ್ಪಳವೆ ವೆಂಕಪ್ಪನಿಗೆ ಕೇಳಿ ಬರುತ್ತಿದೆ. ಅರ್ಧ ತಾಸಿನಲ್ಲಿ ಅವನು ವಿಶಾಲವಾದ ಬೈಲುಪ್ರದೇಶವನ್ನು ಕಂಡನು.

ದೂರದೂರದ ವರೆಗೆ ಭೂಮಿಯು ಹರಡಿದೆ; ಮೇಲೆ ಅಂತ್ಯವಿಲ್ಲದ ಮುಗಿಲ ಅಂಗಣವಲ್ಲಿ ದಿವ್ಯಜ್ಯೋತಿಗಳು ಕಾಣುತ್ತಿವೆ; ಯಾವುದೊ ಮಾಯೆ ಜನರನ್ನು ಚೇತರಿಸುವಂತೆ ಜಗದಿಂದ ಮುಗಿಲಿನವರೆಗೂ ಹಬ್ಬಿ ನಿಂತಿದ್ದಾಳೆ; ಹಗಲಿನಲ್ಲಿ ಬೆಂದ ಮನವನ್ನು ನಿಶೆಯು ಹೆಗಲ ಮೇಲಿರಿಸಿ ಬೇಕಾದ ಹಾಗೆ ಮನವನ್ನು ತಣಿಸಬಹುದಾಗಿದೆ. ಆದರೆ ಆದಾವುದೂ ವೆಂಕಪ್ಪನ ಹೃದಯವನ್ನು ತಟ್ಟಲಿಲ್ಲ; ಅವನಾತ್ಮವನ್ನು ಅರಳಿಸಲಿಲ್ಲ. ಅವನು ಕಣ್ಣಿದ್ದು ಕುರುಡನಾಗಿದ್ದ; ಕಿವಿಯಿದ್ದು ಕಿವುಡನಾಗಿದ್ದ, ಬಾಯಿಯಿದ್ದು ಮೂಕನಾಗಿದ್ದ. ರಾಜಮಾರ್ಗವನ್ನು ಬಿಟ್ಟು ಸೀಳ್ದಾರಿಯನ್ನು ಹಿಡಿದು ಒಂದು ಸಣ್ಣ ಕೆರೆಯ ದಂಡೆಗೆ ಬಂದುನಿಂತ.

ಎಲ್ಲೆಲ್ಲಿಯೂ ಮಂದ ಬೆಳಕು ತುಳುಕುತ್ತಿತ್ತು. ಆದರಿಂದಲೆ ಜಗತ್ತನ್ನು ನೋಡಬಹುದಾಗಿತ್ತು. ಕೆರೆಯಲ್ಲಿ ಏನೂ ನೀರಿರಲಿಲ್ಲ. ಅದರ ಬಾಯಿ ಒಣಗಿ ಬಿರುಕುಬಿಟ್ಟಿತು. ಎಲೆಗಳುದುರಿ ಹೋಗಿ ಸುದಾಮನಂತೆ ಬಡಕಾಗಿ ಒಂದು ಗಿಡ ಬೆಳೆದು ನಿಂತಿತ್ತು. ವೆಂಕಪ್ಪನು ಗೋಪಿಯನ್ನು ಆ ಗಿಡದ ಕೆಳಗೆ ನಿಲ್ಲಿಸಿದ. ನಿಲ್ಲುವಷ್ಟರಲ್ಲಿಯೇ ಉಸಿರ್ಗರೆದು ಗೋಪಿಯು ನೆಲಕ್ಕೆ ಬಿದ್ದಿತು. ಅದನ್ನು ನೋಡಿ ವೆಂಕಪ್ಪನು ಮತ್ತಿಷ್ಟು ಕಕ್ಕಸಬಟ್ಟನು.

ಅವನಿಗೆ ಸಹಿಸಲಾರದ ವೇದನೆಯಾಯಿತು. ಇದೇ ಕೆರೆಯ ಹತ್ತಿರ ಅವನು ಗೋಪಿಯನ್ನು ಮೊದಲಿಗೆ ಕಂಡಿದ್ದನು ಆಗ 'ಅಂಬಾಃ ಅಂಬಾಃ ಅಂಬಾಃ' ಎಂದು ಒದರುತ್ತ ಬೆದರಿಕೆಯ ಕಣ್ಣುಗಳಿಂದ ಅತ್ತ ಇತ್ತ ಓಡುತ್ತಿತ್ತು. ಕಟುಕರ ಕೈಯಿಂದ ಪಾರಾಗಿ ಏಕಾಕಿಯಾಗಿ ಸುಳಿದಾಡುತ್ತಿತ್ತು. 'ಅಯ್ಯೋ! ಪಾಪ! ದೇವಿಯು ಮೊರೆಯಿಡುತ್ತಿದೆ' ಎಂದು ಅಂಬಿಕಾ ದೇವಿಯ ಭಕ್ತನಾದ ವೆಂಕಪ್ಪನು ಕರುಣೆಯಿಂದ ತನ್ನ ಹತ್ತಿರ ಕರೆದು ಅದಕ್ಕೆ ಹುಲ್ಲು ತಂದು ಹಾಕಿದನು. ಆಗ್ಗೆ ಭೂಮಿಯು ಎಷ್ಟು ಹಸುರಿಸಿತ್ತು! ಕೆರೆಯ ಮೇಲಿದ್ದ ಅದೇ ಮರವು ಚಿಗುರೊಡೆದು ಕುಲುಕುಲು ನಗುವಂತೆ ಕಾಣುತ್ತಿತ್ತು. ಕೆರೆಯ ತುಂಬಾ ನೀರಿದ್ದವು. ಗೋಪಿಯು ಎಳೆಹುಲ್ಲು ತಿಂದಿತು, ನೀರು ಕುಡಿಯಿತು. ತನ್ನ ಕೊರಳನ್ನು ವೆಂಕಪ್ಪನ ಸ್ವಾಧೀನ ಪಡಿಸಿತು. ಯಾರೂ ಅದರ ಕೊರಳನ್ನು ಕೊಯ್ಯದಂತೆ ನೋಡಿಕೊಳ್ಳುವೆನೆಂದು ಅವನು ದೇವಿಯ ಸಾಕ್ಷಿಯಾಗಿ ಆಣೆ ಮಾಡಿದನು. ಅದನ್ನು ಅಕ್ಷರಶಃ ಪಾಲಿಸುವುದೆ ತನ್ನ ಕರ್ತವ್ಯವೆಂದು ತಿಳಿದನು. ಅದೆಂಥ ರಮ್ಯವಾದ ದಿನವದು! ಹುಣ್ಣಿವೆಯ ಬೆಳುದಿಂಗಳು ಇವನೆದೆಯಲ್ಲಿ ತುಳುಕಾಡಿ 'ನೀನೊಂದು ಧರ್ಮದ ಕಾರ್ಯವನ್ನು ಮಾಡುತ್ತಿರುವಿ' ಎಂದು ಹೇಳಿದಂತಾಗಿತ್ತು. ದಯವೆ ಧರ್ಮದ ಮೂಲವಲ್ಲವೆ!

ಕಷ್ಟವಿರಲಿ, ಸುಖವಿರಲಿ, ದೇವಿಯಿಂದ ಬಂದ ಗೋಪಿಯನ್ನು ಸಾಯುವವರೆಗೆ ಯಾರ ಕೈಯಲ್ಲಿಯೂ ಕೊಡದೆ ಸಲಹುವೆನೆಂದು ಪಣತೊಟ್ಟ ವೆಂಕಪ್ಪನ ಆಶೆಯು ಇಂದು ಮಣ್ಣುಗೂಡಿದೆ. ಅಪಾರವಾದ ತಪ್ಪನ್ನು ಮಾಡಿದೆನೆಂಬ ಎಚ್ಚರಿಕೆಯು ಅವನ ಹೃದಯವನ್ನು ಚುಚ್ಚುತ್ತಿದೆ. 'ಹೋಗಿ ಬಾಃ!'

ಎಂದು ಹೇಳಲು ಅವನಿಗಾಗಲಿಲ್ಲ. ದುಃಖವು ಕುತ್ತಿಗೆಯನ್ನು ತುಂಬಿ ಉಬ್ಬಿ ಬಂದಿತು. ಕುಂಕುಮದ ಚೀಟಿಯನ್ನು ಬಿಚ್ಚಿ ಗೋಪಿಗೆ ಕುಂಕುಮವನ್ನು ಏರಿಸಿದನು. ಮನೆಯಿಂದ ತಂದ ತುಳಸೀ ದಳಗಳನ್ನು ಅದರ ಮುಂದೆ ಇಟ್ಟನು. ಮೈತುಂಬ ಕೈಯಾಡಿಸಿ ತನ್ನ ಹಣೆಯನ್ನು ಅದರ ಹಣೆಗೆ ಹಚ್ಚಿದನು. ಎದ್ದುನಿಂತು ಎಲ್ಲ ದಿಕ್ಕುಗಳಿಗೂ ಕೈಮುಗಿದು ತನ್ನ ಅಪರಾಧವನ್ನು ಕ್ಷಮಿಸಲು ಬೇಡಿಕೊಂಡನು. ಗೋಪಿಯು ವಿಚಿತ್ರವಾದ ದೃಷ್ಟಿಯಿಂದ ವೆಂಕಪ್ಪನನ್ನು ನೋಡಿಯೆ ನೋಡುತ್ತಿತ್ತು.

ವೆಂಕಪ್ಪನು ಕೆರೆಯನ್ನು ಬಿಡುವಾಗ್ಗೆ ಗೋಪಿಯು ಮಲಗಿಕೊಂಡಲ್ಲಿಯೇ 'ಅಂಬಾ!' ಎಂದು ಒದರಿತು. 'ಇನ್ನು ದೇವಿಯ ಚಿತ್ತ' ಎನ್ನುತ್ತ ವೆಂಕಪ್ಪನು ಹಾಗೆಯೆ ಮುಂದೆ ಮುಂದೆ ನಡೆದುಬಿಟ್ಟನು.

———

# ಆ ರಾಮು!

ಮೇಲೆ ವಿಶಾಲವಾದ ನೀಲಮಯ ನಭೋಮಂಡಲ. ಲೋಕವನ್ನೆ ಅವಲೋಕಿಸ ಹೊರಟವನಂತೆ ದಿನಮಣಿಯು ದೀಪ್ತಿಯುಳ್ಳವನಾಗಿ ಮೂಡಣದಲ್ಲಿ ನಿಂತಿದ್ದಾನೆ. ಅವನ ಪ್ರಖರ ಕಿರಣಗಳು ನೀರಿನಲೆಗಳ ಮೇಲೆ ಕೆಳಗು ಮೇಲಾಗುತ್ತಿವೆ. ಚಿಕ್ಕವರು ದೊಡ್ಡವರು ಮೆಟ್ಟಲುಗಳಮೇಲಿಂದ, ಗಡೆ-ಗಡೆಗಳ ಮೇಲಿಂದ ಜಿಗಿಜಿಗಿಯುತ್ತ ನೀರಿನಲ್ಲಿ ಈಜಾಡುತ್ತಿದ್ದಾರೆ; ಸುರ್‌ಕ್ಕ ಎಂದು ನೀರಾಟವಾಡಿ ಕೇಕೆ ಹಾಕುತ್ತಿದ್ದಾರೆ. ಹೆಂಗಸರು ಕೆಲವರು ದಂಡೆಯಲ್ಲಿಯ ಒಗೆದ ಅರಿವೆಗಳ ಮೊಟ್ಟೆಯನ್ನು ಹಿಂಡುತ್ತಲಿದ್ದಾರೆ; ಹಲವರು ಬಿಂದಿಗೆ ಕೊಡಗಳನ್ನು ಲಕಲಕನೆ ತಿಕ್ಕುತ್ತಿದ್ದಾರೆ. ಇವೆಲ್ಲ ಉತ್ಸಾಹದ ಸಪ್ಪಳದಲ್ಲಿ ಮೇಲಿಸಿಂವ ಘಂಟೆಯ ವಾದ್ಯವು ವಾತಾವರಣವನ್ನು ತುಂಬಿಕೊಂಡು ತೇಲಿ ತೇಲಿ ಬರುತ್ತಲಿದೆ. ಹೆಂಗಸರೆ ಆಗಲಿ, ಗಂಡಸರೆ ಆಗಲಿ ಹೊಂಡದಲ್ಲಿ ಸ್ನಾನವಮಾಡಿದವರೆಲ್ಲ ಸಮತಾವಾದದಲ್ಲಿ ಮಮತೆಯನ್ನು ತೋರಿಸುವವರಂತೆ ಆ ಗಂಟೆಯ ನಾಲಗೆಯನ್ನು ಅಲುಗಾಡಿಸುತ್ತಾರೆ. ಎದುರಿಗಿದ್ದ ಮೂರುತಿಗೆ ಆ ಗಂಟೆಯ ಸಪ್ಪಳವು ಕೇಳಿಸುತ್ತದೆಯೊ ಇಲ್ಲವೊ! ಜನರಾಡುವ ಮಾತುಗಳು ಅವನ ಹೃದಯದಲ್ಲಿ ನಾಟುತ್ತಿದ್ದವೊ ಇಲ್ಲವೊ! ಏನೆಂದರೂ ಅವನು ಕಲ್ಲದೆಯವನು! ಆದರೆ ಇನ್ನೊಂದು ಬದಿಗೆ ಕಟ್ಟೆಯ ಮೇಲೆ ಕುಳಿತಿರುವ ಮಂಗಪ್ಪನಿಗೆ ಮಾತ್ರ ಅವೆಲ್ಲವೂ ಅರ್ಥಪೂರ್ಣವಾಗಿ ಕಾಣುತ್ತಿದ್ದವು. ದೇಗುಲದಲ್ಲಿ ನಿನಾದವು ಅವನ ಭಕ್ತಿಭಾವವನ್ನು ಅರಳಿಸಿ ಅವನನ್ನು ಹಾಡಲು ಹಚ್ಚುತ್ತಿತ್ತು. ತಾಳಿಲ್ಲ, ತಂತಿಲ್ಲ—'ರಘುಪತಿ ರಾಘವ ರಾಜಾರಾಮ! ಪತಿತ ಪಾವನ ಸೀತಾರಾಮ!' ಎಂಬ ಪಲ್ಲವಿಯನ್ನು ಮುಕ್ತಕಂಠನಾಗಿ ಹಾಡುತ್ತಿದ್ದ. ನೀರಿನಲ್ಲಿರುವ ಜನರೆಲ್ಲರೂ 'ಸಾಕೋ ಬಿಡಪ್ಪ' ಎಂದು ಒದರಿಕೊಂಡರೂ ಅವನು ತನ್ನ ಹಾಡಿಕೆಯನ್ನು ಬಿಡುತ್ತಿರಲಿಲ್ಲ.

ಅವನಿಗೆ ಬಾಲವೊಂದಿದ್ದರೆ ಸಂಪೂರ್ಣವಾಗಿ ಮಂಗನೆ ಆಗುವನೆಂದು ಜನರೆಲ್ಲರೂ ಚೇಷ್ಟೆಮಾಡುತ್ತಾರೆ. ಒಮ್ಮೆ ಅರ್ಧಾಂಗವಾಯುವಿನ ಬೇನೆ

ಬಂದು ಅವನ ಮೈಕಟ್ಟನ್ನು ಕೆಡಿಸಿಬಿಟ್ಟಿದೆ. ಮೊದಲೆ ಕುರೂಪ! ಅವನ ದಪ್ಪವಾದ ತುಟಿಗಳು, ವಿಶಾಲವಾದ ಹುಬ್ಬುಗಳು, ಮಂಗನಂತೆ ಮುಂಬಂದ ಮೊಗದ ಬಗೆ ಎಲ್ಲವೂ ಡಾರ್ವಿನ್ನನು ಇವನನ್ನು ನೋಡಿಯೆ ತನ್ನ ಸಿದ್ಧಾಂತವನ್ನು ಶೋಧಿಸಿದನೆಂದು ತೋರುವ ಹಾಗಿದೆ. ಯಾರಾದರೂ ನಾಟಕದ ಮಾಲಕರು ಇವನನ್ನು ಕಂಡಿದ್ದರೆ, ತಮ್ಮ 'ಸಂಪೂರ್ಣ ರಾಮಾಯಣ'ದ ನಾಟಕಕ್ಕೆ ಇವನನ್ನು ಹನುಮಂತನ ಪಾತ್ರವನ್ನು ವಹಿಸಲು ಜುಲುಮೆಯಿಂದ ಹೊತ್ತುಕೊಂಡು ಹೋಗಬಹುದಿತ್ತು. ಹೊಂಡದ ಮೇಲೆಯೆ ರಾಮನ ನಾಮವನ್ನು ಕಿರಿಚಿಕೊಳ್ಳುವದಕ್ಕಿಂತ, ನಾಟಕಗೃಹದಲ್ಲಿ ಹಾಗೆ ಮಾಡಿದರೆ ಬೇಕಾದ ಹಾಗೆ ದುಡ್ಡು ಗಳಿಸಬಹುದಿತ್ತು. ಜನರೆಲ್ಲರೂ ಇವನನ್ನು ಮೆಚ್ಚುತ್ತಿದ್ದರು, ಇವನಿಗೆ ಹೂಮಾಲೆಗಳನ್ನು ಅರ್ಪಿಸುತ್ತಿದ್ದರು. ಒಂದು ದೃಶ್ಯದಲ್ಲಿ ಸ್ವತಃ ಶ್ರೀರಾಮನೆ ಪ್ರತ್ಯಕ್ಷನಾಗುತ್ತಿದ್ದ. ಆಹ! ಅದೆಂಥ ಕಲ್ಪನೆ! ಮೂಲೆಯಲ್ಲಿ ಕುಳಿತ ಮಂಗಪ್ಪನನ್ನು ನೋಡಿದಾಗಲೆಲ್ಲ ಈ ಕಲ್ಪನಾವಿಲಾಸವು ನನ್ನಲ್ಲಿ ಬಾರದೆ ಹೋಗಿಲ್ಲ. ಆದರೇನು ಅವನ ಮುಂದೆ ನಾನದರ ವಿಚಾರವನ್ನು ತೆಗೆದಿರಲಿಲ್ಲ. ನನ್ನ ಕಣ್ಣಿಗೆ ಅವನು ಯಾವಾಗಲೂ ಸಂತುಷ್ಟನಾಗಿಯೆ ಕಾಣಿಸುತ್ತಿದ್ದ.

ಅದೇಕೊ ಚಿಕ್ಕಂದಿನಿಂದಲೂ ನನ್ನ ಮೇಲೆ ವಿಶೇಷವಾದ ಮಮತೆ ಅವನದು. ಈಜು ಕಲಿಯಲೆಂದು ಹೋದವನು ನೀರಿಗೆ ಅಂಜಿ ದೂರ ದೂರ ಸರಿಯುತ್ತಿರುವಾಗ, 'ಇಷ್ಟಕ್ಕ ಅಂಜತೀರ್ಯ ಯಪಾ? ಬರ್ರಿ ನಾ ಒಯ್ತೇನಿ' ಎಂದು ತನ್ನ ಹೆಗಲ ಮೇಲೆ ನನ್ನನ್ನು ಕುಳ್ಳಿರಿಸಿಕೊಂಡು ಆಟವಾಡುತ್ತ ಹೋಗಿ ನಡುನೀರಿನಲ್ಲಿ ನನ್ನನ್ನು ಬಿಟ್ಟುಬಿಡುತ್ತಿದ್ದನು. ನಾನು ನೀರು ಕುಡಿಕುಡಿದು 'ಅಯ್ಯೋ' ಎಂದು ಎಲ್ಲರನ್ನೂ ಕರೆಸುತ್ತಿರುವಾಗ 'ಕಾಲ ಬಡಿರಿ........ಕಾಲ ಬಡಿರಿ' ಎಂದು ಉಪದೇಶಿಸುತ್ತ ನನ್ನನ್ನು ದಂಡೆಗೆ ಕರೆತರುತ್ತಿದ್ದನು. ನಾನೆಷ್ಟು ಅವನನ್ನು ಬಯ್ದರೂ ಅವನು ಮಾತ್ರ ಸಿಟ್ಟಿಗೇಳುತ್ತಿರಲಿಲ್ಲ. ನೀರಿನಿಂದ ಎದ್ದುಬಂದ ಮೇಲೆ ಕಟ್ಟೆಗೆ ಕರೆದುಕೊಂಡು ಹೋಗಿ ತನ್ನ ಹೊಟ್ಟೆಯ ಮಗನಂತೆ ಮಮತೆಯಿಂದ ನನ್ನನ್ನು ತನ್ನ ಹತ್ತಿರವೆ ಕುಳ್ಳಿರಿಸಿಕೊಳ್ಳುತ್ತಿದ್ದ; ಮೂಗಿನ ಮೇಲ್ಭಾಗದಲ್ಲಿ ನಾಮವನ್ನೊ ಭಂಡಾರವನ್ನು ಬಡಿಯುತ್ತಿದ್ದ; ಆಮೇಲೆ ಕೈಮಾಡುತ್ತ, ತೊಡೆಯಿಂದ ತಾಳ ಹಾಕುತ್ತ,

‘ ಎಷ್ಟು ಸೇವಿಸಿದರು
ಗುರು ಸಿದ್ಧೇಶನ ಮಹಿಮಾ ತಿಳಿಯದು ’

ಎಂಬ ಹಾಡಿನ ಪಲ್ಲವಿಯನ್ನು ಪ್ರಾರಂಭಿಸುತ್ತಿದ್ದ. ಆ ಹಾಡಿನ ಅರ್ಥವು ನನಗೆಷ್ಟು ತಿಳಿಯುತ್ತಿತ್ತೊ ! ಆದರೆ ಗೋಣು ಮಾತ್ರ ಹಾಕುತ್ತಿದ್ದೆ. ಏಕೆಂದರೆ ಹಿಂದುಗಡೆ ಮಾರುತಿಯ ಪ್ರಸಾದವೆಂದು ನನಗೆ ಅರ್ಧ ಕೊಬ್ಬರಿಯ ಬಟ್ಟಲವನ್ನು ಕೊಡುತ್ತಿದ್ದ. ಎಳೆ ವಯಸ್ಸು; ಅದೆ ನನಗೆ ಎಷ್ಟೊ ಹರುಷವನ್ನು ತರುತ್ತಿತ್ತು.

ನನಗಿಂತಲೂ ನನ್ನ ತಾಯಿಗೆ ಬಹಳ ಆನಂದ. ದೇವರ ಪ್ರಸಾದವೆಂದು ನಾನು ಆ ಬಟ್ಟಲವನ್ನು ಮಮತೆಯಿಂದ ಸ್ವೀಕರಿಸಿದಾಗ ನನಗೊಂದು ಉಂಡೆಯನ್ನು ಕೊಡುತ್ತಿದ್ದಳಲ್ಲದೆ ಮಂಗಪ್ಪನಿಗೂ ಅಕ್ಕಿ ಮುಂತಾದ ಧಾನ್ಯಗಳ ದಾನ ಕೊಡುತ್ತಿದ್ದಳು. ನಮ್ಮ ಓಣಿಯಲ್ಲಿ ಅವನು ಹಾದು ಹೋಗುವವನಿದ್ದರೆ ನಮ್ಮ ಮನೆಗೆ ಬಂದು ‘ ಏನಾದರೂ ಕೆಲಸ ಐತೇನ್ರಿ ? ’ ಎಂದು ಕೇಳದೆ ಹೋಗುತ್ತಿರಲಿಲ್ಲ. ನಾನು ಮನೆಯಲ್ಲಿ ಇದ್ದ ನನ್ನು ಕಂಡು ನನ್ನನ್ನು ಕೂಡಿಸಿಕೊಂಡು ಎಷ್ಟೊ ಹಾಡುಗಳನ್ನು ಹೇಳುತ್ತಿದ್ದ. ಸುತ್ತಲೂ ಕುಳಿತ ಇನ್ನಿತರ ಹುಡುಗರು “ ಮಂಗಪ್ಪ....ಇನ್ನೊಂದು ? ” ಎಂದು ಕೇಳುತ್ತಿದ್ದರು. ಅವನಿಗೂ ದಣಿವೆ ಇರಲಿಲ್ಲ. ಹಗಲೇನು, ರಾತ್ರಿಯೇನು ಹಗಲೆಲ್ಲ ನಮ್ಮ ಮನೆಗೆ ಬರುತ್ತಿದ್ದನು. ಪದ್ಯದಲ್ಲಿ ಧಾಟಿ ಇದ್ದರೇನು, ಇಲ್ಲದಿದ್ದರೇನು ; ಧ್ವನಿಯಲ್ಲಿ ಇಂಪು ಇದ್ದರೇನು, ಇಲ್ಲದಿದ್ದರೇನು ತನಗೆ ತಿಳಿದಂತೆ ಹಾಡುತ್ತಿದ್ದ. ಒಮ್ಮೊಮ್ಮೆ ರಾತ್ರಿಯಲ್ಲಿ ಅವನ ಸಂಗೀತವನ್ನು ಕೇಳುತ್ತ ಹುಡುಗರು ನಿದ್ದೆಹೋಗುತ್ತಿರಲು—

ಗುರು ರಾಮು ಏ, ನೀವೇನ್ಮಾಡತೀರಿ ?
ನಾನೆದ್ದು ಹೋಗುವಾಗ ಸುಮ್ಮನೆ ಮಲಗೀರಿ ?

ಎಂದು ಹಾಡಿದ ಕೂಡಲೆ, ಎಲ್ಲರೂ ನಿದ್ದೆಗಣ್ಣಿನಿಂದ ಎಚ್ಚತ್ತು ಖೊಳ್ಳನೆ ನಗುತ್ತಿದ್ದರು. ನಿದ್ದೆ ಓಡಿಬಿಡುತ್ತಿತ್ತು. ಅವನ ಹಾಡಿನ ಬೆನ್ನ ಹತ್ತುತ್ತಿತ್ತು. ‘ ಏ ಮಂಗಪ್ಪ, ಈ ಹಾಡು ಯಾರ ಕಲಿಸ್ಯಾರ ? ’ ಎಂದು ಕೇಳಿದರೆ ‘ ರಾಮು ದೇವರು ’ ಎಂದೆನ್ನುತ್ತಿದ್ದ. ಹೀಗೆನ್ನುವಾಗ ಅವನು ಎಷ್ಟೆ ಹಾಸ್ಯ ಪ್ರವೃತ್ತಿಯುಳ್ಳವನಾದರೂ ಮುಖಮುದ್ರೆಯು ತುಸು ಬದಲಾದಂತೆ ಗೋಚರವಾಗುತ್ತಿದ್ದಿತು.

ಅದೆಂಥ ವಿಚಿತ್ರವಾದ ಪ್ರೀತಿ! ನಾನು ದೊಡ್ಡವನಾದ ಮೇಲೂ ಮಂಗಪ್ಪನು ನನ್ನನ್ನು ಮರೆತೇ ಇಲ್ಲ. ಬೇಸಿಗೆ ರಜೆಗೆ ನಾನು ಊರಿಗೆ ಬರುವೆನೆಂಬ ಸುದ್ದಿಯನ್ನು ತಾಯಿಯ ಮುಖಾಂತರ ಕೇಳಿಕೊಂಡು ಆ ಹೊತ್ತಿಗೆ ನಿಲ್ದಾಣದಲ್ಲಿ ದಾರಿಕಾಯುತ್ತಿರುತ್ತಾನೆ. ನನ್ನ ಸಾಮಾನುಗಳನ್ನು ಹೊತ್ತುಕೊಂಡು ಮನೆಗೆ ತರುತ್ತಾನೆ. "ಎಷ್ಟು ದಿನ ಇರೂದ್ರೀ?" ಎಂದು ಕೇಳುತ್ತಾನೆ. ಅವನ ಹರಕು ಹರುಕಾದ ಬಟ್ಟೆಗಳನ್ನು, ಕಾಲಲ್ಲಿ ಏನೂ ಇಲ್ಲದೆ ಓಡಾಡುವದನ್ನು ನೋಡಿ ಅವನಿಗೆ ನನ್ನಲ್ಲಿದ್ದ ಅರಿವೆ ಅಂಚಡಿಗಳನ್ನೂ, ಚಪ್ಪಲಿಗಳನ್ನೂ ಕೊಡುತ್ತೇನೆ. ಎಲ್ಲಕ್ಕೂ ಅವನಿಗೆ ಬಲು ಖುಷಿ. ನಾನೇನಾದರೂ ಕೆಲಸ ಹೇಳಿದರೆ ಸಾಕು—ಬೇಗನೆ ಮಾಡಿ ತೋರಿಸುತ್ತಾನೆ.

ಇಂಥ ಮಂಗಪ್ಪನಿಗೆ ಒಂದು ದಿನ "ಹೊಂಡದ ಮೇಲೆ ಏಕಿರೋದು? ನಾಟಕದಲ್ಲಿ ಹೋಗಬಾರದೆ?" ಎಂದು ಚೇಷ್ಟೆಯಿಂದ ಕೇಳಿದೆ. ತುಸು ನಕ್ಕು, ಅನಂತರ ಮುಖದಲ್ಲಿ ಅವನು ಗಂಭೀರತೆಯನ್ನು ತೋರಿಸಿದ. 'ನನ್ನ ದೇವರು ಇಲ್ಲೆ ಇದಾರ್ರಿ' ಅಂದ.

ಗೋಡೆಯ ಮೇಲೆಲ್ಲ 'ರಾಮ' ಎಂದು ಬರೆದಿದೆ. ಗೋಡೆಯ ಒಂದು ಭಾಗದಲ್ಲಿ ದೇವರ ಚಿತ್ರವಿದೆ. ಮೂಲೆಯಲ್ಲಿ ಮೂರು ಕಲ್ಲಿನ ಒಲೆ; ಅವರ ಹತ್ತಿರ ಅಲಿಮನೆಯ ಒಂದೆರಡು ಪಾತ್ರೆಗಳು. ಅದೆ ಅವನ ಸಂಸಾರ—ಅವನ ದೇವರು—ಅವನದೆಲ್ಲವು ಸರಿ!

ಅವನ ಗಂಭಿರವಾದ ಭಾವವು ನನ್ನಲ್ಲಿ ಅಸ್ಪಷ್ಟವಾದ ವೇದನೆಯನ್ನುಂಟು ಮಾಡಿತು. ಆದರೂ ನಾನದನ್ನು ಲಕ್ಷಕ್ಕೆ ತಾರದೆ ಆ ದಿನ ರಾತ್ರಿ ನಮ್ಮ ಮನೆಯ ಕಡೆಗೆ ಬರಲು ಅವನಿಗೆ ಹೇಳಿ ಹೊರಟು ಬಂದೆ.

ಅಂದು ಕಾರ ಹುಣ್ಣಿವೆಯಾಗಿದ್ದಿತು. ಅಂದೆ ನನ್ನ ಹುಟ್ಟುಹಬ್ಬ. ಇಪ್ಪತ್ತೆರಡನೆಯ ವರ್ಷದಲ್ಲಿ ಕಾಲಿಡುತ್ತಿದ್ದೆ. ಮಂಗಪ್ಪನಿಗೆ ಅದೆಲ್ಲವನ್ನೂ ತಿಳಿಸಿದ್ದೆ. ಹುಣ್ಣಿಮೆಯ ಶಾಂತವಾದ ರಾತ್ರಿಯಲ್ಲಿ ಅವನ ಗಾಯನವನ್ನು ಕೇಳಬೇಕೆಂದು ಬಯಸಿದ್ದೆ.

ಏಳು .... ಎಂಟು .... ಒಂಬತ್ತು .... ಗಡಿಯಾರವು ಬಡಿದುಕೊಂಡಿತು. ಕಾಲವು ರೆಕ್ಕೆಗೊಂಡು ಹಾರಿತು. ಆದರೆ ಮಗಂಪ್ಪನ ಸುಳಿವೆ ಕಂಡು ಬರಲಿಲ್ಲ. ಮುಂಜಾನೆಯಿಂದ ಅಷ್ಟು ಹೊತ್ತಿನವರೆಗಾದರೂ ನನ್ನನ್ನು ಕಾಣಲು ಬರಲೇ

ಇಲ್ಲ. ಆಹ್ಲಾದಕರವಾದ ಬೆಳದಿಂಗಳು ಬಿದ್ದುದರಿಂದ ನಾನೇ ಆ ಹೊಂಡದ ಕಡೆ ಹೊರಟೆ.

ಚಪ್ಪಲಿಗಳು ಬಿದ್ದಿವೆ; ಒಂದೆರಡು ಅಂಗಿ ಕೋಟುಗಳು ಹರಡಿವೆ. ಮಂಗಪ್ಪನು ಕೈಯಲ್ಲಿ ಒಂದು ಏಕತಾರಿಯನ್ನು ಹಿಡಿದಿದ್ದಾನೆ.

ಎಷ್ಟೊಂದು ಸೇವಿಸಿದರೂ
ಈ ಜನುಮದ ದುಃಖಾ ತೀರದು.

ಎಂದು ಹಾಡುತ್ತಿದ್ದಾನೆ. ದೂರದಿಂದ ಆಗಸದಲ್ಲಿಯ ಚಂದ್ರನು ಇದೆಲ್ಲವನ್ನು ನೋಡುತ್ತಿದ್ದಾನೆ. ಅವನ ಹಾಡನ್ನು ಕೇಳುತ್ತಿದ್ದಾನೆ. ಸುತ್ತಲಿನ ಪ್ರಪಂಚ ಮಲಗಿಕೊಂಡಿದೆ.

ಸಮೀಪಕ್ಕೆ ಹೋದೆ. ಮಂಗಪ್ಪನಿಗೆ ಎಚ್ಚರಿಕೆ ಇರಲಿಲ್ಲ. ಅವನ ಏಕತಾರಿಯನ್ನು ನಾನೆಂದಿಗೂ ನೋಡಿರಲಿಲ್ಲ. ಅಲ್ಲಿದ್ದ ಚಪ್ಪಲಿ ಅಂಗಿಗಳು ನಾನು ಎಷ್ಟೊ ದಿನಗಳ ಹಿಂದೆ ಕೊಟ್ಟಿದ್ದುವೆ ಆಗಿದ್ದುವು. ನನಗೆ ಮಹದಾಶ್ಚರ್ಯ! ಇನ್ನೂ ಹೀಗೆ ಇವೆ? ಮಂಗಪ್ಪ ದಿನದಂತಿರಲಿಲ್ಲ. ಅವನು ಬೇರೊಂದು ಅವತಾರವನ್ನು ತಾಳಿದ್ದನು.

" ರಾಮು! ರಾಮು!! ರಾಮು!!! " ಎಂದು ತಂತಿಯನ್ನು ಮೀಟಿದ.

" ಓs, ಹೋs, ಹೋs, " ಎಂದು ಬಾರಿಸುವುದನ್ನು ನಿಲ್ಲಿಸುವಂತೆ ಕೂಗಿದೆ. ಕಣ್ಣುಗಳಿಂದ ಕಂಬನಿಗಳು ಧಾರೆಯಾಗಿ ಬರುತ್ತಿದ್ದವು. ಅವು ಯಾವುದೊ ವಿಚಿತ್ರವಾದ ಕಥೆಯನ್ನು ಹೇಳುತ್ತಿದ್ದವು. ಮಂಗಪ್ಪನು ಕಣ್ತೆರೆದು ನನ್ನನ್ನು ನೋಡಿದನು ಕಣ್ತುಂಬ. ಸಂತೋಷಬಟ್ಟನು. ಅಂದೆ ಅವನು ನನ್ನೆದುರು ತನ್ನ ಜೀವನ ಕಥೆಯ ಗಂಟನ್ನೆಲ್ಲ ಬಿಚ್ಚಿದನು. ಕೊನೆಗೆ ' ಕುದ್ದು ಕುದ್ದು ಸಾಕಾತರಿ ಎಪ್ಪ, ಇನ್ಯಾಕ ಬದುಕೋದು ಹೇಸಿ ಬದುಕು ' ಎಂದು ಮುಗಿಲ ಕಡೆ ನೋಡಿ ಸ್ತಬ್ಧನಾದನು.

ರಾತ್ರಿಯಲ್ಲ ನನಗೆ ನಿದ್ದೆಯೆ ಇಲ್ಲ. ಮಂಗಪ್ಪನ ಮಾತುಗಳು ಮತ್ತೆ ಮತ್ತೆ ನನ್ನ ತಲೆಯಲ್ಲಿ ಕುಸ್ತಿಯಾಡುತ್ತಿವೆ. ಅವನು ಬಾರಿಸಿದ ತಂಬೂರಿಯ ನಾದವು ಮೇಲಿಂದ ಮೇಲೆ ನನ್ನ ಕರ್ಣಪಟಲಕ್ಕೆ ಬಡಿದಂತೆ ಭಾಸವಾಗುತ್ತದೆ. ತಂಬೂರಿಯ ಒಂದೇ ಒಂದು ತಂತಿಯು ಮಂಗಪ್ಪನ ಜೀವನದ ಒಂದು ಮಹತ್ವದ ಸಂಗತಿಯನ್ನು ಹೇಳಿತು.

ಅಯ್ಯೋ! ಇದೆಂತಹ ಅದ್ಭುತವಾದ ದೈವದಾಟವು! ನನ್ನ ಮುಖ, ನನ್ನ ಮಾಟ, ನನ್ನ ವಯಸ್ಸು ಆ ಮುಂಗಪ್ಪನನ್ನು ಕೆಣಕಿತೆ? ಮೋಹದಲ್ಲಿ ಅವನನ್ನು ಕೆಣಕಿತೆ? ನನ್ನ ಮುಂದೆ ಹಾಡುತ್ತ, ನನ್ನೆದುರು ಮಾತನಾಡುತ್ತ, ನನ್ನನ್ನೆ ನೋಡುತ್ತ ಮುಂಗಪ್ಪನು ಮುಗ್ಧನಾಗಿ ಕುಳ್ಳಿರುವುದು. ಯಾಕೆಂಬುದರ ಅರಿವು ಇದೀಗ ನನಗೆ ಹೊಳೆಯುತ್ತಿದೆ. ಆದರೆ ನನ್ನಂತಿರುವ ಆ ಮುಂಗಪ್ಪನ ಮಗನು—ಆ 'ರಾಮು'ನು ಎಲ್ಲಿ? ದೂರದಲ್ಲಿ ಪ್ಲೇಗು ಪಿಡುಗಿನ ನೇತಾಳವು ಕಾರಹುಣ್ಣಿಮೆಯಂಥ ಆಹ್ಲಾದಕರವಾದ ಬೆಳದಿಂಗಳಲ್ಲಿ ನಿಂತುಕೊಂಡು ಹುಚ್ಚೆದ್ದು ಕುಣಿಯುತ್ತಿದೆ. ಅವನನ್ನು ಒಯ್ದವನು 'ನಾನು! ನಾನು!' ಎಂದು ಎವೆ ಬಡಿದುಕೊಳ್ಳುತ್ತಿದೆ. ಪಾಪ! ಸಣ್ಣ ವಯಸ್ಸಿನಲ್ಲಿಯೆ, ಇಪ್ಪತ್ತೆರಡನೆಯ ವರ್ಷದಲ್ಲಿಯೆ ಅವನು ವೈಕುಂಠವಾಸಿಯಾಗಬೇಕೆ? ಎಲ್ಲ ವಿಚಾರಗಳು ನನ್ನ ದೇಹವನ್ನೆಲ್ಲ ಜಿವರಿಸಿದವು.

ಮುಂಜಾವಿನ ತಂಗಾಳಿ ಇದೆ ಬೀಸುತ್ತಿತ್ತು. ಕೋಗಿಲೆಯು ಕೂಗುತ್ತ ನನ್ನನ್ನು ಸೋಪು ನಿದ್ದೆಗೆ ಲಲ್ಲೆಗೈದಿತು.

ಆದರೆ ನಿದ್ದೆಯಲ್ಲಿಯೂ ಮತ್ತೆ ಮುಂಗಪ್ಪನಿಗೆ ಎಲ್ಲರೂ ಹೋಗಿಬಿಟ್ಟಿದ್ದಾರೆ. ಅವನೊಬ್ಬನೆ ಬಯಲಿನಲ್ಲಿ ಏಕಾಕಿಯಾಗಿ ಕುಳಿತುಕೊಂಡು ಒಂದೇ ಸವನೆ ಏಕತಾರಿಯನ್ನು ಬಾರಿಸುತ್ತಿದ್ದಾನೆ.

ರಘುಪತಿ ರಾಘವ ರಾಜಾರಾಮು!
ಪತಿತಪಾವನ ಸೀತಾರಾಮು!

ಅವನ ಕಂಠವು ಉಬ್ಬಿ ಉಬ್ಬಿ ಬರುತ್ತಿದೆ. ನಾದವು ತಂತಿಯನ್ನು ತುಂಬಿ ತುಂಬಿ ಸೂರೆಹೊಮ್ಮುತ್ತಿದೆ. ಬಿಟ್ಟುಬಿಡದೆ ಜೋರಿನಿಂದ ತಂತಿಯನ್ನು ಮೀಟುತಿದ್ದಾನೆ. ಅಯ್ಯೋ....ಹರಿಯುತ್ತಿದೆ........ಹರಿಯಿತು...ಎನ್ನುತ್ತಿದ್ದೆ. ಹಾಗೆಯೆ ಎಚ್ಚತ್ತೆ.

*  *  *  *

ಬೆಳಗಿನಲ್ಲಿ ಏಕತಾರಿಯ ಸಂಗಡ ಮುಂಗಪ್ಪನ ದೇಹವನ್ನು ಹೊಂಡದ ನೀರಿನಿಂದ ಹೊರಗೆ ತೆಗೆದುದನ್ನು ಕಂಡೆ. ಏಕತಾರಿಯ ತಂತಿಯು ಹರಿದಿತ್ತು. ಅವನ ಹಾಡು ಈಗ ಹೆಣವನ್ನು ಹಿಂಬಾಲಿಸುವವರ ಹಾಡಾಗಿತ್ತು.

---

# ಟೋಪಿ ಮಾರುತಿ

" ಏ ಕಾಗಿ, ಕಾಳೀ ಮಗನ ! ಯಾಕ ಕೂಗ್ತಿಯಾ ? " ಭಾವಿಯ್ಯ ಲ್ಲಿಯ ಹಗ್ಗ ಮೇಲೆ ಕೆಳಗೆ ಹೋಗುತ್ತಿರುತ್ತದೆ. ಒಂದು ಮೊಳ ಹಗ್ಗ ಸೇದಿ ದರೆ ಅರ್ಧ ಮೊಳ ಒಳಗೆ ಸೇರಿರುತ್ತದೆ.

" ಥೂ ಗುಬ್ಬಿ, ಮಲ್ಲಾಡದಾಗ ನಿನಗಿನ್ನೂ ಮಳೀನ ಆಗಿಲ್ಲ ! ಸುಳ್ಳs ಇಲ್ಲಿ ಗೂಡು ಮಾಡಿಕೊಂಡು ನನ್ನ ತಲೀಮ್ಯಾಲ ಹಳ್ಳು ಹಾಕ್ತೀ ! ರಂಡೆ....ದ್ದು ! "

ಬೇಸಿಗೆಯ ರಣರಣ ಬಿಸಿಲು. ಭಾವಿಯ ಮೇಲೆ ಎಂಥ ನೆರಳೂ ಇಲ್ಲ. ಅವನು ಹಾಗೆಯೇ ಕೊಡವನ್ನು ಜಗ್ಗುತ್ತಿರುತ್ತಾನೆ. ಒಂದು ಕೊಡ ಮೇಲೆ ಬರಬೇಕಾದರೆ ಅವನಿಗೆ ಒಂದು ತಾಸಾದರೂ ಹತ್ತುತ್ತದೆ.

" ಏ ಹಣಮಾ, ಏನು ನಿನ್ನ ನೀರೋ ? ಒಂದು ದಿನ ಭಾವ್ಯಾಗ ಬಿದ್ದು ಸತ್ತರೆ ಸಾಯಬಾರ್ದ ! ನಿನ್ನ ಕೂಳಿನ ಸಲುವಾಗಿ ನಮ್ಮ ಕೆಲಸೆಲ್ಲ ಹಾಂಗೆs ಬಿದ್ದಾವ. " ಎಂದು ಅಡಿಗೆಯ ಮನೆಯಿಂದ ಕೇಳಿಸುತ್ತದೆ.

ಹನುಮಂತನಿಗೆ ಆಗ ಎಚ್ಚರಿಕೆ. ಒಂದು ಕೈಯಲ್ಲಿ ಒಂದು ಕೊಡ ವನ್ನೂ ಇನ್ನೊಂದು ಕೈಯಲ್ಲಿ ಇನ್ನೊಂದನ್ನೂ ಹಿಡಿದುಕೊಂಡು ಬೈಯುತ್ತ, ಏನೋ ಮಟಗುಡುತ್ತ ಭಾವಿಯನ್ನು ಬಿಡುತ್ತಾನೆ.

ಹಣಮಂತನಿಗೆ ಬೇಗನೆ ಊಟ ಮಾಡುವುದು ಗೊತ್ತೇ ಇರಲಿಲ್ಲ. ಬೆಳಗಿನಲ್ಲಿ ಆರುಗಂಟೆಗೆ ಎದ್ದವನು ಮಧ್ಯಾಹ್ನ ಎರಡು ಗಂಟೆಯಾದರೂ ಅವನ ಕೆಲಸಗಳೇ ತೀರುತ್ತಿರಲಿಲ್ಲ. ಮುಂಜಾನೆ ಎದ್ದು ಉಥೋ ಲಕ್ಷ್ಮಣ ಎಂದು ಎರಡು ಮೂರು ಮೈಲು ದೂರವಿರುವ ಮಾರುತಿಯ ಗುಡಿಗೆ ಹೋಗಿಬರಲು ಅವನೆಂದೂ ತಪ್ಪುತ್ತಿರಲಿಲ್ಲ. ಮಾರುತಿಯ ಅಂಗಾರವನ್ನಿಷ್ಟು ಹಣೆಗೆ ಬಡಿದು ಕೊಂಡರೆ ಅವನಿಗೆ ದೇವರ ಮೇಲಿನ ಭಕ್ತಿಯನ್ನು ತೋರಿದ ತೃಪ್ತಿಯಾಗುತ್ತಿರ ಲಿಲ್ಲ. ಮನೆಯ ಹಿತ್ತಿಲದಲ್ಲಿರುವ ತುಳಸೀ ವೃಂದಾವನದ ಸುತ್ತು ಕನಿಷ್ಟ

ಪಕ್ಷ ೮–೧೦ ಸಲವಾದರೂ ತಿರುಗುತ್ತಿದ್ದು, ಆ ಮೇಲೆ ಅಲ್ಲಿಯ ಮೃತ್ತಿಕೆಯನ್ನು ಹಣೆಗೆ ಬಡಿದುಕೊಳ್ಳದೆ ಅವನು ಎಂದೆಂದಿಗೂ ವೃಂದಾವನವನ್ನು ಬಿಟ್ಟು ಆಗಲುತ್ತಿರಲಿಲ್ಲ. ಇಷ್ಟು ಹೊತ್ತಿಗೆ ನೇಸರನು ನೆತ್ತಿಯ ಮೇಲೆ ಬರುವ ವೇಳೆಯಾಗುತ್ತಿತ್ತು. ಮನೆಯಲ್ಲಿಯ ಸಣ್ಣವರೂ ದೊಡ್ಡವರೂ ಅವನನ್ನು ಬೈದೂ ಬೈದೂ ನೀರು ಜಗ್ಗಲು ಹೇಳುತ್ತಿದ್ದರು. ಹಣಮಂತ ಬಾವಿಯ ಮೇಲೆ ನಿಂತುಕೊಂಡರೆ ತೀರಿತು. ಅವನ ಪಾಪ ನೀರಿನಲ್ಲಿ ಇದ್ದೂ ಇದ್ದೂ ಕಾಲೆಲ್ಲ ಸೆಲೆತರೂ ಅಲ್ಲಿ ಕಮಲದ ಬಳ್ಳಿ ಬೆಳೆದರೂ ಅವನಿಗೆ ಎಚ್ಚರಿಕೆಯಿರುತ್ತಿರಲಿಲ್ಲ.

ತನ್ನ ತಂದೆ-ತಾಯಿ ಎಲ್ಲಿಯವರು? ಅವರ ಹೆಸರೇನು? ಇದೇನೂ ಹಣಮಂತನಿಗೆ ಗೊತ್ತಿರಲಿಲ್ಲ. ನಿನ್ನ ತಂದೆಯ ಹೆಸರೇನೆಂದು ಕೇಳಿದರೆ ಸಣ್ಣ ಹುಡುಗರ ಹಾಗೆ 'ತಂದೆ' ಎಂದು ಹೇಳುತ್ತಾನೆ. ತಾಯಿಯ ಹೆಸರನ್ನು ಹೇಳುವುದೂ ಹಾಗೆಯೇ. ಅವನು ಚಿಕ್ಕವನಿರುವಾಗಲೇ ಅನಾಥನಾಗಿ ನಮ್ಮ ಮನೆಯಲ್ಲಿಯೇ ವಾಸವಾಗಿದ್ದಾನೆ. ನನ್ನ ತಂದೆಗೂ ಅವನ ಸಂಪೂರ್ಣ ಪರಿಚಯವಿರಲಿಲ್ಲ. ಏಕೆಂದರೆ ನಮ್ಮ ಮನೆಯಲ್ಲಿ ಅವನ ಪರಂಪರೆ ಬಹಳ ಹಿಂದಿನದು. ತಂದೆಯ ಕಾಲದಲ್ಲಿಯೇ ಅವನು ನಮ್ಮ ಮನೆಗೆ ಊಳಿಗಕ್ಕೆ ಬಂದು ಇನ್ನೂ ಇಲ್ಲಿಯೇ ನೆಲೆಸಿದ್ದಾನೆ. ವರುಷಗಳುರುಳಿದಂತೆ ಹಣಮಂತನಿಗೂ ತನ್ನ ಹಳೆಯ ದಿನಗಳ ನೆನಪು ಹಾರಿ ಹೋಗಿದೆ. ಏನೋ ಅಲ್ಪ ಸ್ವಲ್ಪ ಸುದ್ದಿ ಅವನು ಹೇಳುತ್ತಾನೆ.

ಹಣಮಂತನಿಗೆ ಇದೀಗ ಎಂಬತ್ತು ವರುಷ ಅವನು ಯಾವಾಗಲೂ ಮುದುಕನಿದ್ದಂತೆ ನನಗೆನಿಸುತ್ತದೆ. ಏಕೆಂದರೆ ಅವನು ಚಿಕ್ಕವನಿದ್ದುದು ನನಗೆ ಗೊತ್ತೇ ಇಲ್ಲ. ಎಂಬತ್ತು ವರುಷ ಬಾಳಿನಲ್ಲಿ ಬೆಂದು ಅವನ ಮೈದೊಗಲು ಮುದುಡಿ ಹೋಗಿದೆ. ಬೆನ್ನು ಬಾಗಿದೆ. ಕಣ್ಣು ಒಳಸೇರಿ ನೆತ್ತಿಯನ್ನು ಮುಟ್ಟುವಂತೆ ತೋರುತ್ತದೆ. ಹುಟ್ಟಿದಾಗಲೂ ಅವನು ಹೀಗೆಯೇ. ಇರಬೇಕೇ? ಅವನನ್ನು ನಾನು ನೋಡುತ್ತಿದ್ದುದು ಇದೇ ರೂಪದಲ್ಲಿಯೇ ಅವನನ್ನು ಕಲ್ಪಿಸುವುದು ಯಾವಾಗಲೂ ಇದೇ ಆಕಾರದಲ್ಲಿಯೇ.

ನನಗೂ ಹಣಮನಿಗೂ ವಿಶೇಷವಾದ ಪರಿಚಯ. ನಾನು ಓದುವ ಕೋಣೆಯ ಬಳಿಯಲ್ಲಿಯೇ ಸಾವಧಾನದ ಸ್ಥಳ. ಎಪ್ಪತ್ತು ವರುಷ ನಮ್ಮ

ಮನೆಯಲ್ಲಿದ್ದರೂ ಅವನಿಗೇನು ಪ್ರತ್ಯೇಕ ಕೋಣೆಯಾಗಲೀ ಕಪಾಟಾಗಲಿ ಇರಲಿಲ್ಲ. ಅವನ ಸಾಮಾನುಗಳೂ ವಿಶೇಷವಾಗಿರಲಿಲ್ಲ. ಯಾವುದೋ ಹಳೆಯ ಟ್ರಂಕು ಮಾತ್ರವಿತ್ತು. ಅದರಲ್ಲಿ ಅವನೇನು ಇಡುತ್ತಿದ್ದನೋ ತಿಳಿಯುವ ಹಾಗಿಲ್ಲ. ನಾವು ಯಾರಾದರೂ ಅವರ ಬಳಿ ಸಾರಿದರೆ ಅವನಿಗೆ ಎಲ್ಲಿಲ್ಲದ ಸಿಟ್ಟು.

ಹಣಮಂತನಿಗೆ ಮಡಿ-ಮೈಲಿಗೆಗಳ ಹೌಸು ಬಹಳ. ನೇಮ-ನಿತ್ಯಗಳು ನಿತ್ಯವೂ ಆಗದಿದ್ದರೆ ಅವನಿಗೆ ಬಹಳ ಸಂತಾಪ. ಹಬ್ಬ ಶ್ರಾದ್ಧದ ದಿನಗಳನ್ನು ಎಂದಿಗೂ ಮರೆಯುವ ಹಾಗಿಲ್ಲ. ತನ್ನ ತಂದೆ ಸತ್ತ ತಾರೀಖನ್ನು ನಮ್ಮ ತಂದೆಯ ಅಜ್ಜನವರು ಹೇಳಿಕೊಟ್ಟಿದ್ದರಂತೆ. ಅದನ್ನು ತನ್ನ ಮನದಲ್ಲಿ ಮೂಡಿಸಿಕೊಂಡಿದ್ದ. ಶ್ರಾದ್ಧದ ದಿನ ಅವನ ಕಡೆಯಿಂದ ಉಂಡಿಗಳನ್ನು ಸೆಳೆಯುವದು ನಮ್ಮ ರೂಢಿ. ಹಣಮಂತನು ಶ್ರಾದ್ಧ ಮಾಡಿಸುವನೆಂದರೆ ಅಂದು ನಮಗೆಲ್ಲ ಹಬ್ಬ. ಬೆಳಗಿನಿಂದ ಊಟದ ಹೊತ್ತಿನ ವರೆಗೆ ಸಂಪೂರ್ಣ ಏಕಾದಶಿ. ಹಬ್ಬದದಿನಗಳಲ್ಲಿ ನಾವು ಸುದಾಮನಂತೆ ಇದ್ದರೂ ಸಹ ಹಣಮಂತನು ಮಾಡಿಸಿದ ಶ್ರಾದ್ಧದ ದಿನಗಳಲ್ಲಿ ನಾವು ಪಕ್ಕಾ ಸುರಪುರದ ಆಚಾರ್ಯರಾಗಿ ಬಿಡುತ್ತಿದ್ದೆವು. ಪಾಪ ಬಡವ! ಆದರೆ ನಮಗೆಲ್ಲಿ ಅದರ ಎಚ್ಚರಿಕೆ? ಉಂಡಿ ತಿನ್ನುವುದರಲ್ಲಿ ಮೇಲಾಟ ನಡೆಯುತ್ತಿತ್ತು.

ಹಣಮಂತನು ಹಜಾಮತಿಯನ್ನು ಮಾಡಿಸಿಕೊಂಡರೆ ಸುಮ್ಮನೆ ಯಾವುದಾದರೊಂದು ಹೊಂಡದಲ್ಲಾಗಲೀ ಕೆರೆಯಲ್ಲಾಗಲೀ ಮೈ ಮುಳುಗಿಸಿಕೊಂಡು ಶುದ್ಧನಾಗಿ ಬರುತ್ತಿರಲಿಲ್ಲ. ಅವನಿಗೆ ಅಂದು ಬಿಸಿನೀರಾಗಬೇಕು. ಅಬ್ಬಾ! ಅವೆಂಥ ಶ್ರೀಮಂತತನ! ಅಂದು ಅವನಿಗೆ ಎಣ್ಣೆ ಶೀಗೇಕಾಯಿ ಬೇಕು. ಎರಡು ಮೂರು ಬಕೀಟು ನೀರಾದರೂ ಅವನ ಮಡಿವಂತಿಕೆಗೆ ಸಾಕಾಗುತ್ತಿರಲಿಲ್ಲ. ಇಂಥ ಸೌಕರ್ಯ ಆಳಾಗುವವನಿಗೆ ಹೇಗೆ ದೊರೆಯಬೇಕು? ಇದಕ್ಕಾಗಿ ಅವನು ಹುಡುಗರ ವಶೀಲಿ ಸಂಪಾದಿಸಿದ್ದ. ಅವನ ಮುಂದೆ ಹಾಯ್ದು ಹೋಗುವ ಪ್ರತಿಯೊಬ್ಬ ಹುಡುಗನನ್ನು ಭಿಕ್ಷುಕರಿಗಿಂತ ಕಡೆಯಾಗಿ ಅತ್ಯಂತ ಆಳವಾದ ಕನಿಕರದ ಉದ್ಗಾರದಿಂದ ಈಗ ಕಾಲು ಬೀಳುವನೋ ಅನ್ನುವಂತೆ ಮಾತನಾಡಿಸುತ್ತಿದ್ದ. ಅವನ ದೈನ್ಯದುಂಬಿದ ಧ್ವನಿಗೆ ಎಲ್ಲಿಯೂ ಮನ್ನಣೆ ದೊರೆಯುತ್ತಿರಲಿಲ್ಲ. ಕೊನೆಗೆ ನನ್ನ ಕಡೆಗೆ ಬರುವುದು ನಿಶ್ಚಿತ. "ಅಪ್ಪ,

ಶ್ಯಾಣ್ಯಾ ಈ ವರುಷ ೧ನೇ ನಂಬರ ಬರ್ತೀ ನೀನು". ಎಂದು ನನ್ನ ಹರಸಿ ಇನ್ನೂ ಒಂದೆರಡು ಮಾತು ಅಂದು, ನನ್ನನ್ನು ಬಚ್ಚಲ ಮನೆಗೆ ಒಯ್ಯುತ್ತಿದ್ದ. ನಾನು ಚಿಕ್ಕವನಾಗಿದ್ದುದರಿಂದ ಅವನ ಮಾತಿಗೆ ಮರುಳಾಗುತ್ತಿದ್ದೆ. ಆದರೆ ಅವಕ್ಕಿಂತ ಹೆಚ್ಚಾಗಿ ನನ್ನದೊಂದು ಕೆಲಸವೂ ಆಗುತ್ತಿತ್ತು. ಅವನು ನಾನು ಬೇಡಿದಷ್ಟು ನೀರು ಜಗ್ಗಿ ಕೊಡುತ್ತಿದ್ದ. ನಾನು ಮಾಡಿದ ಉಪಕಾರ ಮರೆಯುತ್ತಿದ್ದಿಲ್ಲ. ಹಣಮಪ್ಪನ ಸಲುವಾಗಿ ನಾನು ತಯಾರಾಗುವಷ್ಟರಲ್ಲಿ "ತಾನು ಮುದುಕನಾದರೂ ಚೈನಿ ಬ್ಯಾರೆ ಬೇಕು ಮಹಾರಾಯಗ" ಎಂದು ಒಳಗಿನಿಂದ ಧ್ವನಿ ಬರುತ್ತಿತ್ತು.

ಪ್ರತಿದಿನ ಎರಡು ಸಲ ದೇವಾಲಯಕ್ಕೆ ಹೋಗುವುದು ಹಣಮಪ್ಪನ ರೂಢಿಯಷ್ಟೆ. ಅವನು ಸಂದಿಗೊಂದಿಯಲ್ಲಿ ಹಾದು ಹೋಗುತ್ತಿರುವಾಗ ಚಿಕ್ಕ ಚಿಕ್ಕ ಹುಡುಗರು ಮನೆಯ ಮುಂದೆ ನಿಂತುಕೊಂಡು "ಏ ಹನುಮಾ ಹೊಂಟೀನಪಾ, ನಾವೂ ಬರತೇವು" ಎಂದು ಕೂಗುತ್ತಿದ್ದವು. ಆ ಹುಡುಗರಿಗಾಗಿ ಪ್ರೀತಿಯಿಂದ ಅವನು ಚುರುಮುರಿ ದಾಣಿಗಳನ್ನು ಸಂಗ್ರಹಿಸಿ ತನ್ನ ಹತ್ತಿರ ಇಟ್ಟುಕೊಳ್ಳುತ್ತಿದ್ದ. ಪ್ರತಿಯೊಬ್ಬ ಹುಡುಗನ ಕೈಯಲ್ಲಿ ಒಂದು ಮುಷ್ಟಿ ಹಾಕಿ "ನನ್ನ ಹೆಗಲ ಮ್ಯಾಲೆ ಎತ್ತಿಕೊಂಡು ಹೋಗ್ತೀನಿ ಬರ್ತೀಯಾ?" ಎಂದು ಕೇಳುತ್ತಿದ್ದ, ಚಿಕ್ಕಮಕ್ಕಳು ಅವನ ಹೆಗಲನ್ನೇ ಕ್ರೀಡಾಂಗಣ ಮಾಡಿ ಒಂದೆರಡು ನಿಮಿಷ ಆಟವಾಡಿ ಮನೆಗೆ ಓಡಿ ಹೋಗುತ್ತಿದ್ದವು. ಹಣಮಪ್ಪನು ದಾರಿಯನ್ನು ಬಿಟ್ಟು ಹೊರಳುವಾಗ್ಗೆ ಈ ಮುದ್ದು ಮಕ್ಕಳು "ಏ ಹನಮಪ್ಪಾ!" ಎಂದು ಒಳಗೊಳಗಿನ ಧ್ವನಿಯಿಂದ ಕೈ ಮಾಡಿ ಕೂಗುತ್ತಿದ್ದವು.

ಹಣಮಪ್ಪನಿಗೆ ತಾನು ಎಂದಾದರೂ ಲಗ್ನವಾಗಬೇಕು, ಮಕ್ಕಳನಾಡಿಸಬೇಕು ಎಂಬ ವಿಚಾರ ತಲೆಯಲ್ಲಿ ಸುಸುಳಿತ್ತೋ ಇಲ್ಲವೋ! ನಾನೊಮ್ಮೆ ಅವನಿಗೆ "ನಿನ್ನ ಹೆಂಡತಿ ಎಲ್ಲಿ?" ಎಂದು ಚೇಷ್ಟೆಯಿಂದ ಕೇಳಿದ್ದಕ್ಕೆ ಮೊದಲು ಭಯಂಕರ ಸಿಟ್ಟಿಗೆದ್ದ. "ಏಕೆ ವೈಕುಂಠಕ್ಕೆ ಹೋಗಿದ್ದಾಳೇನು? ಇನ್ನೊಬ್ಬಳನ್ನು ತಂದು ಕೊಡಲ್ಯೋ?" ಎಂದೂ ಕೇಳಿದ್ದೆ. ಅದಕ್ಕೆ ಅವನು ಮೌನಾವತಾರ ತಾಳಿ, ಆ ಮೇಲೆ "ನಮ್ಮಂಥವರು ಮದುವೆಯಾಗಬಾರದು. ದೇವರು ಹೇಳ್ಯಾನ" ಅನ್ನುತ್ತಿದ್ದ.

ರಾಮ ಸೀತೆ ಅವರೇ ಜಗತ್ತಿನಲ್ಲಿಯ ಸ್ತ್ರೀಪುರುಷರೆಂದು ಹಣಮಪ್ಪನಿಗೆ ಎನಿಸುತ್ತದೆ ಅವರೇ ತಂದೆ-ತಾಯಿ. ಅವರೇ ಈ ಭೂಮಿಯಲ್ಲಿ

ಇದ್ದಾರೆ. ಅವರದೇ ಸೇವೆಯನ್ನು ಮಾಡಬೇಕು. ಎಂಬುದು ಅವನ ವಿಚಾರ—ಅಲ್ಲ— ಅದೇನೋ ಅವನಲ್ಲಿ ಬೇರೂರಿದ ಭಾವನೆ. ಅಂತೇ ಅವನು ಸಂಪೂರ್ಣ ರಾಮಾಯಣ ನಾಟಕವನ್ನು ನೋಡಲು ಎಂದೂ ಮರೆಯುತ್ತಿರಲಿಲ್ಲ. ನಮ್ಮೂರಲ್ಲಿ ರಾಮಾಯಣ ದೊಡ್ಡಾಟವನ್ನಾಗಿಯೇ ಆಡಲಿ, ನಾಟಕವನ್ನಾಗಿಯೇ ಆಡಲಿ, ಆ ವೇಳೆಯಲ್ಲಿ ಹಣಮಂತನು ಹಾಜರಾಗಿರುವುದು ಸ್ವಾಭಾವಿಕವಾಗಿತ್ತು. ಇದು ಊರ ಜನರಿಗೆ ಅರಿತ ಮಾತಾಗಿತ್ತು. ಅಪರಂಪಾರ ಜನದಟ್ಟಣಿ ಇರಬೇಕು, ಆ ಗದ್ದಲಲ್ಲಿ ನುಸುಳಿಹೋಗುವ ಹಣಮಪ್ಪನ ಅಪೂರ್ವವಾದ ವೈಖರಿಯನ್ನು ನೋಡುವಂತಿರುತ್ತಿತ್ತು. ಕಲಾವಾಣಿ ಕಂಪನಿಯ "ಸಂಪೂರ್ಣ ರಾಮಾಯಣ" ವನ್ನು ಸೂರ್ಯೋದಯದ ವರೆಗೆ ಕಣ್ತುಂಬ ನೋಡಿ ಮನೆಗೆ ಬಂದು ಮಾರುತಿಯು ತನ್ನ ಮಿತ್ರಮಂಡಲಿಯೊಡನೆ ಹಾಡಿದ "ರಘುಪತಿ ರಾಘವ ರಾಜಾರಾಮ........" ಪಲ್ಲವಿಯನ್ನು ನೀರು ಸೇದುವ ಮುಂದೆ ಕುಣಿಕುಣಿದು ಎಷ್ಟು ಹಾಡಿದರೂ ಹಣಮಂತನಿಗೆ ಸಂತೃಪ್ತಿಯಿರಲಿಲ್ಲ.

ಒಂದು ದಿನ ದೇವಾಲಯದಿಂದ ತಿರುಗಿ ಬಗುತ್ತಲೇ ಹಣಮಂತ ಹಾಸಿಗೆ ಹಾಸಿ ಬಿದ್ದುಕೊಂಡ. ರಾತ್ರಿ ಊಟಕ್ಕೆ ಏಳಲಿಲ್ಲ. ಹೊಟ್ಟೆಗೆ ಏನೂ ಬಸಿಮುಕೊಳ್ಳಲಿಲ್ಲ. ಏನನ್ನಾದರೂ ತೆಗೆದುಕೊಳ್ಳಲು, ಎರಡು ಮೂರು ಸಲ ನನ್ನ ತಂದೆ ಕೇಳಿದರು. ಅದಕ್ಕೆ ಹಣಮಂತನ ಒಪ್ಪಿಗೆ ಸಿಗದ್ದರಿಂದ ಅವರೂ ಹಾಗೆಯೇ ಬಿಟ್ಟುಬಿಟ್ಟರು.

ಹಣಮಂತನು ಮಲಗಿಕೊಳ್ಳುತ್ತಿದ್ದುದು ನನ್ನ ಕೋಣೆಯ ಬಾಗಿಲಲ್ಲಿಯೇ, ರಾತ್ರಿ ಹನ್ನೆರಡು ಗಂಟೆಯಾಗಿತ್ತು. ಒಂದೇ ಸವನೆ ನರಳುವ ದನಿ ಕೇಳಬಂತು. ಎದ್ದು ಹೋಗಿ ಹಣಮಂತನನ್ನು ಮುಟ್ಟಿ ನೋಡಿದೆ. ಅಬ್ಬಾ! ಭಯಂಕರ ಜ್ವರ! ನಾನು ಬಂದಕೂಡಲೇ ನನ್ನ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡ. ಅವನ ಕಣ್ಣುಗಳಲ್ಲಿ ಧಾರೆಯಾಗಿ ನೀರು ಬರುತ್ತಿದ್ದವು.

ಅವನಿಗೆ ಬಂದ ಕಟ್ಟನ ಜ್ವರಗಳು ಬೇಗನೆ ಕಡಿಮೆಯಾಗಲಿಲ್ಲ. ಡಾಕ್ಟರ ಔಷಧಿಯನ್ನು ನಿರಾಕರಿಸಿದ. ಅವರು ಮೀನ ಮುಂತಾದ ಪ್ರಾಣಿಗಳನ್ನು

ಕೊಂದು ಔಷಧ ಕೊಡುವರೆಂದು ಅವನ ಭಾವನೆ. ಯಾವನೋ ಒಬ್ಬ ಬ್ರಾಹ್ಮಣ ವೈದ್ಯಕೊಟ್ಟ ಔಷಧಿಯನ್ನೇ ತಿಂದು ನಾಲ್ವತ್ತು ದಿನ ಹಾಸಿಗೆಯಲ್ಲೇ ಉರುಳಾಡಿದ. ಜ್ವರ ಕಡಿಮೆಯಾಗಿ ಎದ್ದು ಓಡಾಡುತ್ತಿರುವಾಗ ಮಸಣದಿಂದ ಆದೇ ಎದ್ದು ಬಂದ ಎಲುಬಿನ ಹಂದರದಂತೆ ವಿಕಾರವಾಗಿ ತೋರುತ್ತಿದ್ದ.

ಈ ಮಾತಿಗೆ ಎರಡು ಮೂರು ವರುಷ ಮೊದಲು ನಾನು ನಮ್ಮೂರನ್ನು ಬಿಟ್ಟು ಬೇರೆ ಊರಿಗೆ ಕೆಲಸಕ್ಕಾಗಿ ಹೋಗಿಬಿಟ್ಟಿದ್ದೆ. ಹೀಗಾಗಿ ಹಣಮಂತನ ಭೆಟ್ಟಿ ನನಗೆ ವಿಶೇಷವಾಗಿ ಆಗಿರಲಿಲ್ಲ. ನನ್ನಾಕೆಗೆ ಒಮ್ಮೆ ಸಮ್ಮದಿ ಇಲ್ಲದಾಗ್ಗೆ ಒಬ್ಬ ನೀರಿನವನನ್ನು ಹಲವು ತಿಂಗಳು ಇಟ್ಟುಕೊಂಡಿದ್ದೆ. ಅವನ ಕೆಲಸ ಎಂಟು ಕೊಡಗಳನ್ನು ದಿನಾಲೂ ಹಾಕುವುದು. ಒಂದು ದಿನ ಒಂದು ಕೊಡ ಹೆಚ್ಚು ನೀರು ಬೇಕಾದರೆ ಅವನಿಗೆ ಹೆಚ್ಚಿನ ಹಣ ತೆರಬೇಕಾಗುತ್ತಿತ್ತು. ಅಬ್ಬಾ! ಆಗ ನಮ್ಮ ಹಣಮಂತನ ನೆನಪಾಗದೆ ಇರುತ್ತಿರಲಿಲ್ಲ. ನಮ್ಮೂರಿಗೆ ಸೂಟಿಗೆಂದು ಬಂದಾಗ್ಗೆ ಹಣಮಪ್ಪನ ಮುಂದೆ ಈ ಸುದ್ದಿಯನ್ನು ಹೇಳಿದೆ. ಅವನು ಮೌನವಾಗಿಯೇ ಇದ್ದ.

ಇದೀಗ ಅವನಲ್ಲಿ ವಿಪರೀತವಾದ ಬದಲಾವಣೆಯಾಗಿದೆ. ಅವನು ಮೊದಲಿನಂತಿಲ್ಲ. ಅವನಿಂದ ಕೆಲಸವಾಗುವ ಹಾಗಿಲ್ಲ. ಎಂಬತ್ತು ಎಂಬತ್ತೈದು ವರುಷದ ಮುದುಕನಾದರೂ ಅವನಿಗೆ ಜ್ವರ ಬಂದೊಡನೆ ಸಣ್ಣನೆ ಇಳಿದು ಹೋದ. ಆದರೂ ಅವನು ನೀರು ಜಗ್ಗುವುದನ್ನು ಬಿಟ್ಟಿರಲಿಲ್ಲ. ತನ್ನ ಕೈಯಿಂದಾದಷ್ಟು ಎಂಟ-ಹತ್ತು ಕೊಡಗಳನ್ನಾದರೂ ಜಗ್ಗಿ ಹಾಕುತ್ತಿದ್ದ. ಆದರೆ ಇಂಥ ಕೆಲಸ ನಮ್ಮ ತಂದೆಯವರ ಮನಸ್ಸಿಗೆ ಬರಲಿಲ್ಲ. ಬಹಳ ಜನ ಮನೆಯಲ್ಲಿರುವುದು. ಎಂಟು-ಹತ್ತು ಕೊಡ ನೀರಿನಿಂದೇನಾಗಬೇಕು? ನೀರಿನ ಬಗ್ಗೆ ವ್ಯವಸ್ಥೆ ಬೇಗನೆ ಆಯಿತು.

ನಾನು ಒಂದು ದಿನ ಒಂದು ಕಾದಂಬರಿಯನ್ನೋದುತ್ತಿದ್ದಾಗ ಹೊರಗಿನಿಂದ ಏನೋ ಗಲಿಬಿಲಿ ಕೇಳಬಂತು. ಕೋಣೆಯಿಂದ ಹೊರಬಿದ್ದು ನೋಡಿದೆ ನಾಲ್ಕೈದು ಹುಡುಗರು ಮುಕುರಿದ್ದಾರೆ. ಹಣಮಪ್ಪನ ಹಾಸಿಗೆಯನ್ನು ತಲೆಬಾಗಿಲ ಹೊರಗೆ ಒಗೆಯುವ ಸಿದ್ಧತೆಯಲ್ಲಿದ್ದಾನೆ.

ಮುದುಕ ಅವರಿಂದ ಹಾಸಿಗೆಯನ್ನು ಬಿಡಿಸಿಕೊಳ್ಳುವ ಅಸಾಧ್ಯ ಪ್ರಯತ್ನದಲ್ಲಿದ್ದಾನೆ. ನಾನು ಸಮೀಪಕ್ಕೆ ಬರಲು ಅವರೆಲ್ಲ ಅಲ್ಲಿಂದ ಚದುರಿಬಿಟ್ಟರು. ಹಣಮಂತ ತನ್ನ ಹಾಸಿಗೆಯನ್ನು ಹೊತ್ತುಕೊಂಡು ತೇಕುತ್ತ ಒಳಗೆ ಬಂದು ನನ್ನನ್ನು ಹರಸುವ ನೋಟವಾಗಿ ಅವನ ಕಣ್ಣುಗಳು ಕಂಡವು. ಆದರೆ ಅವನಿಗೆ ಮಾತು ಬರಲಿಲ್ಲ.

ಅದೇ ಸಂಜೆಯು ಊಟವಾದಮೇಲೆ ನಾನು ಅಡುಗೆಯ ಮನೆಯಲ್ಲಿ ಅತ್ತಿಂದಿತ್ತ ಓಡಾಡುತ್ತಿದ್ದೆ. ಅಷ್ಟರಲ್ಲಿ ಅಡುಗೆಯ ಮನೆಯಿಂದ ಈ ನುಡಿಗಳು ಕೇಳಬಂದವು—

" ಇವನ್ಯಾರು ನಮಗ? ಇವಗೇಕೆ ನಮ್ಮಲ್ಲಿ ಊಟ? ಸುಮ್ಮನೆ ಮನೆ ಬಿಟ್ಟು ಹೊರಗೆ ಹಾಕಿ. ಬೇಕಾದಲ್ಲಿ ಬಿದ್ದುಕೊಳ್ಳಲಿ. "

" ಅವನಿಗೇನು ನಾಚಿಗೀನ ಇಲ್ಲ. ಎಷ್ಟು ಬೈಯಬೇಕು? ಎಷ್ಟು ಹೊಡಿಬೇಕು? "

" ಒಲ್ಲೆ ಹೆಂಗ ಅಂತಾನ? "

" ಕುತ್ತಿಗೆ ಹಿಡಿದು ಹೊರಗ ದಬ್ಬಿರಿ ಅಂತ ಇವತ್ತ ಆ ಸಂದಿಯ ನಾಲ್ಕೈದು ಹುಡುಗರಿಗೆ ಹೇಳಿದ್ದೆ........"

ನಾನು ಹಾಗೆಯೆ ಕೋಣೆಗೆ ಹೋದೆ. ರಾತ್ರಿ ನಿದ್ರೆಯು ಬರಲಿಲ್ಲ.

ಎರಡು ಮೂರು ದಿನ ಉರುಳಿಹೋದ ಮೇಲೆ ಒಂದು ದಿನ ಹಲವು ಹುಡುಗರು ಆ ಟ್ರಂಕನ್ನು ಎತ್ತುವ ಸಾಹಸ ಮಾಡಿದರಂತೆ. ಹಣಮಪ್ಪ ಅಳುತ್ತ ನನ್ನ ಬಳಿ ಬಂದು ಈ ಅನ್ಯಾಯದ ಸಂಗತಿ ವರ್ಣಿಸಿದ. ಆ ಟ್ರಂಕನ್ನು ಜೋಕೆಯಾಗಿಟ್ಟುಕೊಳ್ಳಲು ಹೇಳಿ ಅದನ್ನು ನನ್ನ ಸ್ವಾಧೀನಪಡಿಸಿದ. ಆದರೆ ಅದರ ಕೀಲೀಕೈ ಮಾತ್ರ ನನ್ನ ಕಡೆಗೆ ಕೊಡಲಿಲ್ಲ. ಅದನ್ನು ತೆಗೆಯಕೂಡದೆಂದು ಎಚ್ಚರಿಸಿ ಹೋದ.

ರಾತ್ರಿ ಮತ್ತೆ ವಿಚಾರಿಸಿದೆ. ತಂದೆ ಕಡುತರ ಸ್ವಭಾವದವರು. ಅವರ ವಿರುದ್ಧ ಹೋಗುವುದೇ? ಸೂಟಿ ಮುಗಿದು ತಿರುಗಿ ಹೋಗುವ ಮುಂದೆ ಅವನನ್ನು ಕರೆದುಕೊಂಡು ಹೋಗಬೇಕೆಂದು ನಿರ್ಧಾರ ಮಾಡಿದೆ. ಅವನಿಗೆ ಕೇಳಿದೆ. ಆತನು ಒಪ್ಪಲಿಲ್ಲ.

ಹಣಮಂತನ ಪರಿಸ್ಥಿತಿ ಮತ್ತಿಷ್ಟು ಹದಗೆಡುತ್ತ ಬಂದಿತು. ಅವನಿಗೆ ಕೂಳು ಹಾಕುವುದನ್ನೂ ಬಿಟ್ಟುಬಿಟ್ಟರು. ಇಡೀ ದಿನ ಉಪವಾಸನ್ನೆದ. ರಾತ್ರಿ ಗುಪ್ತವಾಗಿ ಅವನ ಕೈಯಲ್ಲಿ ಹಲವು ರೂಪಾಯಿ ಕೊಟ್ಟೆ. ನನಗೆ ಸ್ನಾನಕ್ಕೆ ನೀರು ತೋಡಿದ.

ಅವನ ಸ್ಥಾನ ಈಗ ಬದಲಾಯಿಸಲ್ಪಟ್ಟಿತು. ಹೊರಗಿನ ಸಣ್ಣ ಕಟ್ಟೆಯ ಮೇಲೆ ಮಲಗುವುದಕ್ಕೆ ಆರಂಭಿಸಿದ. ಚಳಿಯಿರಲಿ, ಮಳೆಯಿರಲಿ, ಅವನು ಮಲಗಿಕೊಳ್ಳುವುದು ಅಲ್ಲಿಯೇ.

ಮನೆಯಲ್ಲಿ ಕೂಳು ಸಿಗುವುದು ದುಸ್ತರವಾದ ಮೇಲೆ ಅನ್ನಹಾರದಲ್ಲಿ ಮನೆಮನೆಗೆ "ಓಂ ಭವತಿ ಭಿಕ್ಷಾಂದೇಹಿ" ಪ್ರಾರಂಭವಾಯಿತು. ಆದರೆ ಅದನ್ನೆಲ್ಲ ತಂದು ನಮ್ಮ ಮನೆಯಲ್ಲಿಯೇ ಒಂದು ಮೂಲೆಯಲ್ಲಿ ಕೂತು ತಿನ್ನುತ್ತಿದ್ದ. ಒಮ್ಮೊಮ್ಮೆ ರಾತ್ರಿ ಹನ್ನೆರಡು ಗಂಟೆಗೆ ಅವನು ರೊಟ್ಟಿ ಕಟಿಯುವ ಸಪ್ಪಳ ಕೇಳಿ ಬರುತ್ತಿತ್ತು. ಮನುಷ್ಯ ಭಿಕ್ಷೆಗೆ ಟೊಂಕ ಕಟ್ಟಿದ ಮೇಲೆ ಅಭಿಮಾನ ಹೇಗೆ ನಿಲ್ಲಬೇಕು? ಹಣಮಪ್ಪ ಎಲ್ಲಿಯಾದರೂ ಹಾದುಹೋದರೆ ಅವನು ಹಾಸ್ಯಕ್ಕೆ ಗುರಿಯಾಗುತ್ತಿದ್ದ.

ನಾಟಕಕ್ಕೆ ಹೋದರೂ ಇದೇ ರೀತಿಯ ಫಜೀತಿ. ರಾಮಾಯಣ ನೋಡಲು ಅವನ ಬಳಿ ರೊಕ್ಕವಿರುತ್ತಿರಲಿಲ್ಲ. ಆದರೂ ಯಾರ ವಸೂಲಿಯಿಂದಾದರೂ ಹೋಗಬೇಕೆಂಬ ಆಸೆ ಅವನದು ಒಂದು ಸಲ ನಾಟ್ಯರಂಗದ ಮೇಲೆ ಅವನನ್ನು ತಂದು ಲಗಾ ಒಗಿಸಿದರಂತೆ! ಅವನಿಗೊಂದು ಬಾಲವನ್ನೂ ಹಚ್ಚಿದ್ದರಂತೆ.

ನಾನು ಊರಿಗೆ ಹೋಗುವ ದಿನ ಹಣಮಂತನನ್ನು ಮಾತನಾಡಿಸಲು ಬಾವಿಕಟ್ಟೆಯ ಕಡೆ ಹೋದೆ. ಅವನೇನನ್ನೋ ಮಾತನಾಡುತ್ತಿದ್ದ.

"ಕಾಗೀ, ಬಾರಪಾ ಇಲ್ಲ ಕೂಡು."

ಬಾವಿಯ ಮೇಲೆ ಒಂದು ಕಾಗೆ ಇತ್ತು. ಅದಕ್ಕೆ ಕೆಲವು ಡಾಣಿಗಳನ್ನು ಬಗೆದ.

"ಗುಬ್ಬೀ, ಕುಣಿಯಪಾ"

ಕುಂಬಿಯ ಮೇಲೆ ಕುಳಿತ ಗುಬ್ಬಿಗೆ ಹಲವಸ್ತು ಬಗೆದ.

" ಹಾ, ಇಂದು ಶ್ರಾದ್ಧವು ಮುಗಿಯಿತು !"

" ಯಾವ ಶ್ರಾದ್ಧ ? " ಎಂದು ನಾನು ಕೇಳಿದೆ.

ಅವತ್ತೇ ಅವನ ತಂದೆಯ ಶ್ರಾದ್ಧವಿತ್ತಂತೆ. ನನಗೆ ಹಿಂದಿನ ಉಂಡಿಯ ನೆನಪಾಯಿತು.

ಅಂದು ಊರಿಗೆ ಹೋಗಿ ಬರುತ್ತೇನೆಂದು ಹೇಳಿದಾಗ್ಗೆ ನನ್ನ ಕೈಕಾಲು ಗಟ್ಟಿಯಾಗಿ ಹಿಡಿದುಕೊಂಡು ಅವನು ಅತ್ತುಬಿಟ್ಟ.

ನಾನು ಊರಿಗೆ ಹೋದ ಎರಡು ದಿನಗಳಲ್ಲಿಯೇ ಹಣಮಪ್ಪನಿಗೆ ಮತ್ತೆ ಭಯಂಕರ ಜ್ವರ ಬಂದ ಸುದ್ದಿ ನನ್ನ ಕಿವಿಗೆ ಮುಟ್ಟಿತು. ಅವನು ತನ್ನ ಟ್ರಂಕು ಬಹಳ ನೆನಿಸುತ್ತಿದ್ದನಂತೆ. ಆ ಸುದ್ದಿ ತಿಳಿದ ಕೂಡಲೇ ನಾನು ಮತ್ತೆ ತಿರುಗಿ ಟ್ರಂಕನ್ನು ತೆಗೆದುಕೊಂಡು ಬಂದೆ.

ಆದರೆ ಹಣಮಂತ ಮನೆಯಲ್ಲಿರಲಿಲ್ಲ. ಜ್ವರದಲ್ಲಿ ಎದ್ದು ಮಾರುತಿಯ ಗುಡಿಗೆ ಹೋಗಿದ್ದ. ನಾನು ತಿರುಗಾಡುತ್ತಾ ಹೋಗುವ ಹೊತ್ತಿಗೆ ನನಗೊಂದು ಸುದ್ದಿ ಬಂತು. ವಿಚಿತ್ರ ವ್ಯಥೆ ನನ್ನನ್ನು ನುಂಗಿ ಬಿಟ್ಟಿತು. ಹಣಮಂತ ಮಾರುತಿಯ ಪಾದ ಸೇರಿದನಂತೆ.

ಚಿತೆಯು ಆರಿಹೋದರೂ ನನ್ನ ಕಣ್ಣಲ್ಲಿ ಇನ್ನೂ ಉರಿ ಕಾಣುತಿತ್ತು. ಧೈರ್ಯಮಾಡಿ ಟ್ರಂಕಿನ ಕೀಲಿ ಮುರಿದೆ. ಮುರಿಯುವ ಹೊತ್ತಿಗೆ ಹಣಮಪ್ಪ ಚೀರಿದಂತಾಯಿತು; ಒಳಗೆ ಒಂದು ಜರತಾರಿ ವಸ್ತ್ರದ ಟೊಪ್ಪಿಗೆ ಇತ್ತು. ಅದರಲ್ಲಿ ನೂರು ರೂಪಾಯಿಗಳಿದ್ದವು. ಆ ರೂಪಾಯಿಗಳು ಅವನ ಅಂತ್ಯ ವಿಧಿಗೆಂದು ಬಳಿಸಲಾದವು.

ಅದರಲ್ಲಿ ಅತ್ಯಂತ ಪ್ರಾಚೀನ ಕಾಗದವೊಂದಿತ್ತು. ಅದು ನನ್ನ ಕೈಸೇರಿತು. ಸಾವಧಾನದಿಂದ ತೆರೆದು ನೋಡಿದೆ. ಅದರಲ್ಲಿ ಹಣಮಪ್ಪನ ಮನೆತನದ ಬಗ್ಗೆ ಸ್ವಲ್ಪ ಇತಿಹಾಸವಿತ್ತು.

ಅವನು ಟೋಪಿ ಮನೆತನದವನಾಗಿದ್ದನು. ಆ ಮನೆತನದವರು ಯಾವುದೋ ಅರಸರ ಆಸ್ಥಾನದಲ್ಲಿ ಸೈನ್ಯಾಧಿಕಾರಿಯಾಗಿದ್ದರಂತೆ. ರಾಜ

ಮನೆತನದ ವಿಶ್ವಾಸಕ್ಕಾಗಿ ಅವರಿಗೆ ಅರಸನು ಒಂದು ರಾಜ ಚಿಹ್ನದ ಟೊಪ್ಪಿಗೆಯನ್ನು ಕೊಟ್ಟಿದ್ದನಂತೆ. ಆದ್ದರಿಂದ ಅವರಿಗೆ "ಟೋಪಿ" ಎಂದು ಅಡ್ಡ ಹೆಸರು ರೂಢಿಯಾಗಿತ್ತಂತೆ.

ಆ ರಾಜರು, ಆ ಸೈನ್ಯಾಧಿಕಾರಿಗಳು ಹಣಮಪ್ಪ ಎಲ್ಲರೂ ನಾಶವಾಗಿ ಹೋದರು. ಆದರೆ ಆ ದಿನ ನನ್ನ ಕಣ್ಣಿಗೆ ಕಂಡುದು ಆ ಟೊಪ್ಪಿಗೆಯೊಂದೇ !

---

# ರಾಮಿ

'ಸಲಾಮ್ರಿ'

ರೈಲಿನ ಹೊತ್ತಾಗಿದೆ. ವೆಂಕಟೇಶನು ಒಂದೇಸವನೆ ತನ್ನ ಕೈಯಲ್ಲಿಯ ಗಡಿಯಾರವನ್ನು ನೋಡುತ್ತಿದ್ದಾನೆ.

'ಸಲಾಮ್ರೀ ಏಕ ಪೈಸಾ.'

ಆಗ ಮತ್ತೆ ಒದರಿದಳು. ಟಾಂಗಾದ ತುದಿ ಹಿಡಿದುಕೊಂಡು ಓಡ ಲಾರಂಭಿಸಿದಳು. ಮೈತುಂಬ ಹರಕು ಬಟ್ಟೆ ತೊಟ್ಟಿದ್ದಾಳೆ. ಕೂದಲುಗಳನ್ನು ಹರವಿದ್ದಾಳೆ. ಹೊಲಸು ಮೈ; ಹೊಲಸು ಅರಿವೆ. ಎಲ್ಲವೂ ಹೊಸು ಹೊಲಸು.

'ಅಯ್ಯೋ ಮುಟ್ಟಬೇಡ, ಏ ಸರಿ ದೂರ.'

'ಏಕ ಪೈಸಾ....,

ಅದೇ ಸಾಲೆಯನ್ನು ಬಿಟ್ಟು ಹೊರಬಿದ್ದ ಹುಡುಗರು 'ಹುಚ್ಚಿ ರಾಮಿ ಬಂದ್ಲು....ಹುಚ್ಚಿ ರಾಮಿ' ಎಂದು ಹಿಡಿತುಂಬ ಮಣ್ಣನ್ನು ತುಂಬಿಕೊಂಡು ಆಕೆಯ ಮೇಲೆ ತೂರುತ್ತ ನಡೆದಿದ್ದರು.

ಈ ದೃಶ್ಯವನ್ನು ವೆಂಕಟೇಶನಿಗೆ ನೋಡುವುದಾಗಲಿಲ್ಲ. ಹತ್ತಿರ ಲಕ್ಷ್ಮಿ ಬೇರೆ ಕೂತಿದ್ದಳು. ತನ್ನ ಜೇಬಿನಿಂದ ಒಂದು ಕಾಸನ್ನು ತೆಗೆದು ಹುಚ್ಚಿಯ ಮೈಮೇಲೆ ಎಸೆದನು.

'ಸಲಾಮ್ರೀ' ಎಂದು ಹುಡುಗರ ಗುಂಪಿನಲ್ಲಿ ಮಾಯವಾದಳು.

* * * *

ಧಡಕ್! ಧಡಕ್! ವೆಂಕಟೇಶನು ಮುಗ್ಧನಾಗಿ ಕುಳಿತಿದ್ದಾನೆ. ರೈಲು 'ರಾಮಿ ಹುಚ್ಚಿ! ರಾಮಿ ಹುಚ್ಚಿ!' ಎಂಬ ಸಪ್ಪಳವನ್ನೇ ಮಾಡುವಂತೆ ಅವ ನಿಗೆ ಅನಿಸುತ್ತಿತ್ತು. ಮದುವೆಯಾದ ಮೇಲೆ ಲಕ್ಷ್ಮಿಯ ಸಂಗಡ ಎಷ್ಟೋ ಸಲ ಎಷ್ಟು ಹುರುಪಿನಿಂದ ಇರುತ್ತಿದ್ದ! ತಂದೆ ತಾಯಂದಿರ ಮಮತೆ ಬಂಧುಬಳಗ

ವವರ ಒಲುಮೆ, ಎಷ್ಟೊಂದು ಅವನ ಹೃದಯದಲ್ಲಿ ಚಿನ್ನಾಟವಾಡುತ್ತಿದ್ದವು! ಲಕ್ಷ್ಮಿಯ ಸಂಗಡ ತನ್ನ ಊರಿನ ಬಗ್ಗೆ ಮಾತನಾಡಿಯೇ ಆಡುತ್ತಿದ್ದ. ಅವನ ನಾಲಗೆಯೆ ಸೋಲುತ್ತಿರಲಿಲ್ಲ. ಆದರೆ ಇಂದು ಮೌನವಾಗಿದ್ದಾನೆ. ಲಕ್ಷ್ಮಿ ಎರಡು ಮೂರು ಸಲ ಕೈಮುಟ್ಟಿ 'ಏನ್ರೀ' ಎಂದು ಕೇಳಿದರೂ ಅವನಿಗೆ ಪ್ರಜ್ಞೆಯಿಲ್ಲ.

ರಾಮಿ ಹುಚ್ಚಿ! ಮತ್ತೆ ಮತ್ತೆ ಅವನ ಮನಸ್ಸಿನಲ್ಲಿ ಸುಳಿದಾಡುತ್ತಿದೆ; ಮಣ್ಣಿನ ಧೂಳಿಯಲ್ಲಿ, ಪುಂಡ ಹುಡುಗರ ಕೇಕೆಯಲ್ಲಿ ಮರೆಯಾಗಿ ಹೋದ ರಾಮಿಯ ದೃಶ್ಯ ಅವನ ಕರುಳನ್ನು ಹಿಂಡಿ ಹಿಂಡಿ ಒಗೆಯುತ್ತಿದೆ.

ಅಹುದು. ವೆಂಕಟೇಶನೂ ಹುಡುಗನಿದ್ದ. ರಾಮಿಯ ಪರಿಚಯವಾದಾಗ್ಗೆ ಹುಡುಗಿಯಿದ್ದಳು. ರಾಮಿಯೂ ವೆಂಕಟೇಶನ ಸಂಗಡ ಗೋಲಿ-ಗುಂಡು ಆಡಲಿಕ್ಕೆ ಬರುತ್ತಿದ್ದಳು. "ನಾ ಬಲ್ಲಿ! ನಾನು ಗೆದ್ದೆ! ಡೀಕು ನೀನು" ಎಂದು ಹುರುಪಿನಿಂದ ಮಾತನಾಡುತ್ತ ಗೇಲಿಯಾಡುತ್ತಿದ್ದಳು. ವೆಂಕಟೇಶನನ್ನು ಸೋಲಿಸಿ ಡೀಕಲಿಕ್ಕೆ ಹಚ್ಚಿದಾಗ್ಗೆ ಅವನ ಕೈತೊಗಲೆಲ್ಲ ಸುಲಿದು ಬಿಡುತ್ತಿತ್ತು. 'ಏ ರಾಮೀ, ಗಂಡರಾಮೀ' ಎಂದು ಹಲ್ಲು ಕಿರಿಯುತ್ತಿದ್ದ.

ರಾಮಿಯ ನಿಜವಾದ ಹೆಸರೇನೊ ಯಾರಿಗೂ ಗೊತ್ತಿಲ್ಲ. ಊರಲ್ಲಿ ಯಾರನ್ನು ಕೇಳಿದರೂ ಅವರು 'ರಾಮಿ' ಎಂದೇ ಕರೆಯುವರು. ಅವಳು ಗಂಡಸರಿಗಿಂತ ಗಂಡಸಾಗಿದ್ದಳು. ಗಂಡುಹುಡುಗರ ಟೋಳಿಯಲ್ಲಿ ನಿಶ್ಚಿಂತಳಾಗಿ ತಿರುಗಾಡಲು ಅವಳು ಎಂದೂ ಹೆದರಲಿಲ್ಲ. ಅವರ ಸಂಗಡ ಚಿಣಿಫಣಿ ಹುಡತೀತಿ, ಪೋಯೋ, ಚಂಡು ಎಲ್ಲ ಆಟಗಳನ್ನು ಆಡುತ್ತಿದ್ದಳು. ಅವರ ಸಂಗಡ ಚೇಷ್ಟೆ ಮಾಡುತ್ತ ಓಡಾಡುತ್ತಿದ್ದಳು. ಓಣಿಯಲ್ಲಿ ಅವಳನ್ನು ಕಂಡವರೆಲ್ಲ 'ಗಂಡರಾಮಿ' ಎಂದು ಕರೆಯಲು ಪ್ರಾರಂಭಿಸಿದರು. ಅದೇ 'ರಾಮಿ, ರಾಮಿ' ಎಂಬ ಹೆಸರು ಪ್ರಸಿದ್ಧವಾಯಿತು.

ರಾಮಿಯ ಹೆಸರು ಎಷ್ಟೋ ಜನರ ನಾಲಗೆಗಳಲ್ಲಿ ಆಡುತ್ತಿತ್ತು. ಅದೆಂತಹ ಪ್ರಸಿದ್ಧಿ! ಅದೆಲ್ಲ ಅವಳ ಗಂಡುಬೀರಿತನ. ದುಂಡ ದುಂಡ ಅಂಗಾಂಗಗಳು, ಸಾಧಾರಣ ದಪ್ಪವಾದ ತುಟಿಗಳು, ಹಾರುವ ಹುಬ್ಬುಗಳು, ಮಸು ತೇಜವುಳ್ಳ ಕಣ್ಣುಗಳು ಬೆನ್ನಿನ ಭಾಗವನ್ನು ಮುಚ್ಚುವ ಪಟ್ಟವಾಗಿ ಬೆಳೆದ ಅವಳ ಕೂದಲುಗಳು, ಎಲ್ಲವೂ ಮೋಹಕವಾಗಿದ್ದವು. ಆದರೆ ಮೆದುಳಿನಲ್ಲಿ ಏನೂ ತಥ್ಯವಿರ

ಲಿಲ್ಲ. ಹೆಂಗಸಿನ ಮೃದುಹೃದಯ ಆಕೆಯಲ್ಲಿರಲಿಲ್ಲ. ಓರಣ ನಾಜೂಕುತನ ಯಾವವೂ ಅವಳಿಗೆ ಗೊತ್ತಿರಲಿಲ್ಲ. ಶೌರ್ಯವನ್ನಷ್ಟೆ ಬೇಡುತ್ತಿದ್ದಳು; ಸ್ವಾತಂತ್ರ್ಯವನ್ನಷ್ಟೆ ಬೇಡುತ್ತಿದ್ದಳು. ಹಿಂದು ಹುಡುಗರ ಸಂಗಡ ಚಡ್ಡಿಯನ್ನು ಹಾಕಿಕೊಂಡು ಈಜಲಿಕ್ಕೆಂದು ಹೋಗುತ್ತಿದ್ದಳು. ಅವಳು ಮೇಲಿಂದ ಹಾರಿ ನೀರಿನಲ್ಲಿ ಮುಳುಮುಳುಗಿ ಈಜುವಾಗ್ಗೆ ಮೇಲೆ ನಿಂತ ಕೆಲವು ಯುವಕರು ಬೆರಗಾಗಿ ಅವಳನ್ನೇ ದಿಟ್ಟಿಸಿ ನೋಡುತ್ತಿದ್ದರು. ಅವಳು ಸೀರೆಯ ಸೆರಗನ್ನು ಕಟ್ಟಿಕೊಂಡು ಮೇಲಕ್ಕೆ ಕೈಗಳನ್ನೆತ್ತಿ ಜೋರಿನಿಂದ ಥಿಣಿಯನ್ನು ಹೊಡೆಯುವಾಗ್ಗೆ ಎಲ್ಲಿಯೋ ಗದ್ದಲದಿಂದ 'ಭಲೆ ಭಲೆ' ಎಂಬ ಸದ್ದು ಕೇಳಬರುತ್ತಿತ್ತು.

ವೆಂಕಟೇಶನೂ ಇಂಥ ಗುಂಪುಗಳಲ್ಲಿ ಎಷ್ಟೋ ಸಲ ಓಡಾಡಿದ್ದನು. ಇಂಥ ವಿಷಯಗಳು ಅವನ ಕಿವಿಗಳ ಮೇಲೆ ಬಿದ್ದಿದ್ದವು. ರಾಮಿಯು ಯಾವಾಗಲಾದರೊಮ್ಮೆ ಭೆಟ್ಟಿಯಾದಾಗ್ಗೆ ಅವಳ ಇತಿಹಾಸವನ್ನು ತಿಳಿದುಕೊಳ್ಳಬೇಕೆಂದು ಆ ಮಾತುಗಳ ಪ್ರಸ್ತಾಪವನ್ನು ಎತ್ತುತ್ತಿದ್ದನು. ಆದರೆ ಅವಳು ಯಾವುದಕ್ಕೂ ಉತ್ತರ ಕೊಡುತ್ತಿರಲಿಲ್ಲ. ಆಟಗಳ ವಿಚಾರವನ್ನಷ್ಟೆ ಮಾತನಾಡುತ್ತಿದ್ದಳು.

ವೆಂಕಟೇಶನಿಗೆ ಮನಸ್ಸನ್ನು ಹಿಡಿದಂತಾಗುತ್ತಿತ್ತು. ತಂದೆತಾಯಿಗಳ ಮುಂದೆ ಅವಳ ಹೆಸರನ್ನು ಎತ್ತಿದ ಕೂಡಲೇ "ಅವಳ ಗುರ್ತು ಎಲ್ಲಿ ಹಚ್ಚಿದೆಯೋ ಮೂರ್ಖ!" ಎಂದು ಬೈದುಬಿಡುತ್ತಿದ್ದರು. ಆ ಗಂಡರಾಮಿಯ ಬಗ್ಗೆ ವೆಂಕಟೇಶನಿಗೆ ಏಕೋ ಕಳವಳ.

ಕಾಲವೂ ಹಾಗೆಯೆ ಇರುವುದೆ! ಮಕ್ಕಳು ಹಾಗೆಯೆ ಮಕ್ಕಳಾಗಿ ಇರಬಹುದೆ! ರಾಮಿಯು ಬೆಳೆಯುತ್ತ ನಡೆದಿದ್ದಾಳೆ. ವೆಂಕಟೇಶನೂ ಬೆಳೆಯುತ್ತಿದ್ದಾನೆ. ವೆಂಕಟೇಶನು ಅದೇ ಊರಿನಲ್ಲಿ ಇಂಗ್ಲೀಷ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿದ್ದಾನೆ. ರಾಮಿಯು ಬೀದಿ ಬೀದಿ ತಿರುಗುತ್ತಿದ್ದಾಳೆ. ಆಕೆಯ ನಡಿಗೆಯಲ್ಲಿ ಗಂಡುಸತನವು ಮತ್ತಿಷ್ಟು ಒಡೆದು ಕಾಣುತ್ತಿದೆ. ಮುಖಮುದ್ರೆಯಲ್ಲಿ ಬದಲಾಗುತ್ತಿದೆ. ಗಂಡಸರಿಗಿಂತ ಹೆಂಗಸರಲ್ಲಿ ಎಷ್ಟು ಬೇಗನೆ ಮನ್ಮಥನು ಕಂಡುಕೊಳ್ಳುತ್ತಾನೆ! ಜನರನ್ನು ಆಕರ್ಷಿಸುವ ಮತ್ತೊಂದು ಕಳೆ ಅವಳಲ್ಲಿ ತೋರಲಾರಂಭಿಸಿದೆ.

ವೆಂಕಟೇಶನು ಸಾಲೆಯಿಂದ ಬರುವಾಗಲೊ ಅಥವಾ ಹೋಗುವಾಗಲೋ ಅಥವಾ ಮತ್ತ್ಯಾವುದಾದರೂ ವೇಳೆಯಲ್ಲಿಯೋ ರಾಮಿಯನ್ನು ನೋಡುತ್ತಿರುತ್ತಾನೆ. ಅವಳು ಅವನನ್ನು ಮುಂಜಾವಿನಲ್ಲಿ ಭೆಟ್ಟಿಯಾದರೆ "ಈಸಲಿಕ್ಕೆ ಬರ್ತಿಯೇನು?" ಎಂದು ಕೇಳುವಳು; ಕೆಲವೊಂದು ಸಲ ಯಾವುದಾದರೊಂದು ಆಟವಾಡಲು ಕರೆಯುತ್ತಿದ್ದಳು. ಇದು ವೆಂಕಟೇಶನಿಗೆ ಅಸಹ್ಯವೆನಿಸುತ್ತಿತ್ತು. ಅವಳಿಗೆ ಜಬರಿಸಿದ್ದ. ಆದರೆ ಅವಳು ಕೇಳಬೇಕೆ? ಮುಂದೆ ಮುಂದೆ ಅವಳನ್ನು ಮಾತನಾಡಿಸುವುದನ್ನೂ ಬಿಟ್ಟು ಅವಳನ್ನು ಕಂಡಕೂಡಲೇ ದೂರ ಹಾಯುತ್ತಿದ್ದನು.

ವೆಂಕಟೇಶನು ದೂರದಲ್ಲಿ ಮತ್ತೊಂದು ಬದಿಯಲ್ಲಿ ಹೋಗುವಾಗ್ಗ ರಾಮಿಯನ್ನು ಹೌರಗೆ ಹೊರಳಿ ಹೊರಳಿ ನೋಡುತ್ತಿದ್ದ. ದಿನದಿನವೂ ಅದೇನು ಬದಲಾವಣೆ! ಅಂದವಾದ ಪತ್ತಲದ ಸೆರಗನ್ನು ಹೇಗೆಯೋ ಮೈಮೇಲೆ ಹಾಕಿಕೊಳ್ಳುತ್ತಿದ್ದಳು. ತರತರದ ಬ್ಲೌಜಗಳನ್ನು ಹಾಕುತ್ತಿದ್ದಳು. ಬಣ್ಣಬಣ್ಣದ ಚಪ್ಪಲಿಗಳನ್ನು ಹಾಕುತ್ತಿದ್ದಳು. ಇದೆಲ್ಲ ವೆಂಕಟೇಶನಿಗೆ ವಿಚಿತ್ರವೆನಿಸಿತು. 'ಇದು ಎನು? ಇವಳು ಹೀಗೇಕೆ?" ಎಂದು ಕೇಳಬೇಕೆಂದು ಒಂದು ಸಲ ಅವಳ ಎದುರಿಗೇ ಬಂದನು. ಆದರೆ ಧೈರ್ಯಸಾಲದು. ಹಾಗೆಯೆ ದಾರಿಯಲ್ಲಿಯ ಮರದ ಬೊಡ್ಡೆಯಲ್ಲಿ ಅಡಗಿಕೊಂಡುಬಿಟ್ಟ; ಅವಳು ಕೈ ಬೀಸುತ್ತ ಹಾದುಹೋದಳು! ಘಮುಘಮು ಸುವಾಸನೆಯೂ ಅವಳ ಬೆನ್ನುಹತ್ತಿ ಹೋಯಿತು!

ಅಂದಿನಿಂದ ವೆಂಕಟೇಶನಿಗೆ ಅದೋನೊ ದೊಡ್ಡ ಸಂಶಯ. ಪರೀಕ್ಷೆಯ ಅಭ್ಯಾಸಕ್ಕಿಂತಲೂ ರಾಮಿಯ ಬಗ್ಗೆ ಅವನು ಎಷ್ಟೋ ಸಲ ವಿಚಾರಿಸುತ್ತಿದ್ದ. 'ಇವಳು ಯಾರು? ಎಲ್ಲಿಯವಳು?'

ಒಂದು ದಿನ ಅಕಸ್ಮಾತ್ತಾಗಿ ವೆಂಕಟೇಶನು ರಾಮಿಯ ಎದುರಿಗೆ ಬಂದ. ಆದರೆ ಆಕೆ ಅವನನ್ನು ಏನೂ ಮಾತಾಡಿಸಲಿಲ್ಲ. ಕೈಬೀಸುತ್ತ ಹಾಗೆಯೆ ಸಾಗಿಯೋದಳು. ತನಗೆ ಬಗೆ ಹರಿಯದಾದ ಪ್ರಶ್ನೆಯನ್ನು ತಿಳಿದುಕೊಳ್ಳಬೇಕೆಂದು ಆತುರನಾಗಿ ಒಂದು ದಿನ ಬಣ್ಣದ ಚೆಂದವಾದ ಒಂದು ಅರಿವೆಯ ತುಣುಕನ್ನು ಕೊಟ್ಟನು. ಅವಳು ಇವನನ್ನು ನೋಡುತ್ತ ವಿಚಿತ್ರವಾಗಿ ಹುಬ್ಬು

ಹಾರಿಸಿದಳು; ಎಂದೂ ಕಾಣದಂಥ ನಗೆಯನ್ನು ನಕ್ಕಳು. ರಾಮಿಯು ಮೊದಲಿನಂತೆ ಆಟಕ್ಕೆ ಕರೆಯಲಿಲ್ಲ. ಮತ್ತೇನೂ ಅವಳು ಮಾತನಾಡಲಿಲ್ಲ.

ಇದೇನು ವಿಚಿತ್ರ! ತೋಟದಲ್ಲಿ ಒಂದು ಹೂವು ವಿಕಸಿತವಾಗಿ ನಿಂತು, ತನ್ನ ಸುವಾಸನೆಯನ್ನು ಎಷ್ಟು ದೂರ ಬೇಗನೆ ಹರಡುವುದು! ಅದರ ಸುಳಿವನ್ನು ಕಂಡುಹಿಡಿದು ಎಷ್ಟು ಜನರು ಅದನ್ನು ಮೂಸಲು ಯತ್ನಿಸುವರು! ರಾಮಿಯೂ ಹೂವು! ಸಂದಿ ಸಂದಿಗಳಲ್ಲಿ ಅವಳಿಗೆ ಸುಸ್ವಾಗತವು!!

ನಾಲ್ಕು ವರ್ಷವಾಗಿಹೋಯಿತು. ವೆಂಕಟೇಶನು ಊರಿನಿಂದ ದೂರವಾಗಿಯೇ ಇದ್ದಾನೆ. ತನ್ನ ಅಭ್ಯಾಸಕ್ಕೆಂದು ಹೋದವನು ಸೂಟಿಯಲ್ಲಿಷ್ಟೆ ತಿರುಗಿ ಬರುತ್ತಿದ್ದನು ಬಂದು ಕೆಲವೇ ದಿನಗಳನ್ನು ಊರಲ್ಲಿ ಕಳೆದು ತಿರುಗಿ ಹೋಗಿಬಿಡುತ್ತಿದ್ದನು. ಕೆಲವೇ ದಿನಗಳಿದ್ದರೂ ರಾಮಿಯ ನೆನಪು ಯಾವಾಗಲಾದರೊಮ್ಮೆ ಹಾಯುತ್ತಿತ್ತು. ಆದರೆ ಅವಳ ಸುಳಿವನ್ನು ಅವನು ಕಂಡಿರಲಿಲ್ಲ.

ಬೇಸಿಗೆಯ ಸೂಟಿ. ಮಧ್ಯಾಹ್ನದಲ್ಲೆಲ್ಲ ಬಿಸಿಲಿನ ತಾಪವನ್ನು ತಾಳಿ-ಬಾಳಿ-ಬೆಂಡಾದ ವೆಂಕಟೇಶನು ಸಂಜೆಯಲ್ಲಿ ತಂಪಾದ ಹವೆಯು ಬೀಸುತ್ತಿರಲು ಉಡಿಗೆ-ತೊಡಿಗೆಗಳನ್ನು ಓರಣವಾಗಿ ತೊಟ್ಟುಕೊಂಡು ಮನೆ ಬಿಟ್ಟು ಅದೇ ಹೊರಟಿದ್ದ. ಊರ ಸಮೀಪದ ಒಂದು ಓಣಿಯಲ್ಲಿ ಯಾರೋ ನರಳುವ ಧ್ವನಿ ಕೇಳಬಂತು. ಹೋಗಿ ನೋಡಿದ. ಸುತ್ತಲೂ ಕೆಲವು ಜನರು ನುಕುರಿದ್ದಾರೆ.

ಅವಳು ರಾಮಿಯಾಗಿದ್ದಳು. ಉಡಿಗೆಗಳು ಹಳೆಯವು. ಮೈಬಣ್ಣ ಕಂದಿದೆ, ಮೋರೆಯ ಮೇಲೆ ಕಳೆಯಿಲ್ಲ. ಹೊಟ್ಟೆನೋವೆಂದು ಒಂದೇ ಸವನೆ ನರಳುತ್ತಿದ್ದಾಳೆ. ಸಮೀಪದಲ್ಲಿಯ ಮನೆಯವರು ಬಂದು ಅವಳನ್ನು ಉಪಚರಿಸುತ್ತಿದ್ದಾರೆ. ನೋಡ ನೋಡುತ್ತಲೆ ವೆಂಕಟೇಶನಿಗೆ ಎಲ್ಲವೂ ಭಯಂಕರವೆನಿಸಿತು. ಕಾರಣಗಳನ್ನು ಕೂಡಲೇ ತಿಳಿದುಕೊಂಡನು. ಹೂವನ್ನು ಮೂಸುವಾಗ ಅದು ಮಾಸಿಹೋಗುವ ಅರಿವು ಯಾರಿಗೆ ಉಂಟು! ಆದರೆ ಹೂವನ್ನು ಮೂಸಿದವರು ಎಲ್ಲಿ?

ಕೆಲವು ನಿಮಿಷಗಳಲ್ಲಿಯೇ ಅವಳನ್ನು ಆಸ್ಪತ್ರಿಗೆ ಹೊತ್ತುಕೊಂಡು ಹೋದರು. ವೆಂಕಟೇಶನು ಅವಳನ್ನು ದಿಟ್ಟಿಸಿ ನೋಡಿದನು.

ಒಂದೆರಡು ದಿನ ರಾತ್ರಿಯೆಲ್ಲಾ ನಿದ್ದೆಯೇ ಬರಲಿಲ್ಲ!!

ಇವೆಲ್ಲ ಚಿತ್ರಗಳು ಚಲಚಿತ್ರಗಳಂತೆ—ವೆಂಕಟೇಶನ ಮನಸ್ಸಿನ ಮುಂದೆ ಹಾಯ್ದುವು. ರೈಲು ಧಡಕ್! ಧಡಕ್! ಸಪ್ಪಳ ಮಾಡುತ್ತಿದ್ದಿತು. ಇವನ ಮನಸ್ಸು 'ರಾಮಿ! ರಾಮಿ!' ಎಂದೆನ್ನುತ್ತಿದ್ದಿತು. ಒಮ್ಮೆ ಉದ್ವೇಗದಿಂದ 'ರಾಮಿ' ಎಂದುಬಿಟ್ಟ.

ಸಮೀಪದಲ್ಲಿ ಕುಳಿತ ಲಕ್ಷ್ಮಿ ಮನಸ್ಸಿನಲ್ಲಿ ಹೌಹಾರಿದಳು.

"ಅವಳೇ ಪಾಪ!" ಎಂದಳು.

"ಏನದು? ನಿನಗೇನಾದರೂ ಗೊತ್ತಿದೆಯೆ?" ಎಂದು ಆತುರತೆಯಿಂದ ಕೇಳಿದ.

ತಂದೆಯು ತಾಯಿಯು ಗರ್ಭಿಣಿಯಿರುವಾಗಲೆ ಸತ್ತಿದ್ದನ್ನೂ, ತಾಯಿಯು ಕೂಸನ್ನು ಹಡೆದು ಸತ್ತಿದ್ದನ್ನೂ, ಆ ಮೇಲೆ ರಾಮಿ ಯಾರದೋ ನೆರಳಿನಲ್ಲಿದ್ದುಕೊಂಡು ಯಾರದೋ ಮನೆಯಲ್ಲಿ ಊಟ ಮಾಡಿಕೊಂಡು ಅನಾಥೆಯಾಗಿ ಬಾಳು ಕಳೆದಿದ್ದನ್ನೂ ಲಕ್ಷ್ಮಿಯು ತಾನು ಕೇಳಿದನ್ನೆಲ್ಲವನ್ನು ಹೇಳಿದಳು. ಅವಳು ಗಂಡುಬೀರಿಯಾಗುತ್ತಿರುವುದನ್ನು ನೋಡಿ ಎಲ್ಲರೂ ಅವಳ ಕೈ ಬಿಟ್ಟುಬಿಟ್ಟಿದ್ದರು. ಜಗತ್ತೇ ಅವಳ ಮನೆ. ಅವಳನ್ನು ಎಲ್ಲರೂ ಮಾತನಾಡಿಸುವವರು. ಆದರೆ ಇದೀಗ ಯಾರು ಮಾತನಾಡಿಸಬೇಕು? ಸೌಂದರ್ಯ ಹೋಗಿದೆ. ಜೀವನದಲ್ಲಿ ಸ್ವಾರಸ್ಯವಿಲ್ಲ. ಆ ಹೂವನ್ನು ಯಾರೋ ಬಳ್ಳಿಯಿಂದ ಮುರುಟಿ ಕಿತ್ತು ಎಸೆದಿದ್ದಾರೆ. ಎಲ್ಲರೂ ತುಳಿಯುವವರೆ!

ವೆಂಕಟೇಶ ಮದುವೆಯಾಗಿದ್ದಾನೆ. ಲಕ್ಷ್ಮಿಯಂತಹ ಹೆಂಡತಿಯು ಮನೆಗೆ ಬಂದಿದ್ದಾಳೆ. ಬ್ಯಾಂಕಿನಲ್ಲಿ ಒಂದು ನೌಕರಿ ಸಿಕ್ಕಿದೆ. ತಂದೆ ತಾಯಿಯಿದ್ದಾರೆ; ಸುಖಗಳನ್ನು ಕಷ್ಟಗಳನ್ನು ಅವನ ಬಾಯಿಂದ ಕೇಳಿಕೊಂಡು ಪ್ರೀತಿಯ ಭಾವದಿಂದ ಅವನನ್ನು ನೋಡಿಕೊಳ್ಳುತ್ತಾರೆ. ಅದೆಲ್ಲವೂ ಎಷ್ಟು ಸೊಗಸು! ಆದರೆ ರಾಮಿ........?

ವೆಂಕಟೇಶನ ಕಣ್ಣುಗಳಲ್ಲಿ ಹನಿಗಳು ಬಳಬಳನೆ ಉರುಳಿದವು. ಜನರಿಗೆ ಕಾಣಬಾರದೆಂದು ಕೈಚೌಕವನ್ನು ಕಣ್ಣುಗಳ ಮೇಲೆ ಒಗೆದ.

* * * *

ಮತ್ತೊಂದು ಸಲ ವೆಂಕಟೇಶನು ತಮ್ಮೂರಿಗೆ ಬಂದಿದ್ದ. ಅದೇ ಸ್ಟೇಶನದ ದಾರಿಯಲ್ಲಿ ರಾಮಿಯು ಮತ್ತೆ ಭೆಟ್ಟಿಯಾದಳು. ಸಲಾಮು ಹೊಡೆದು 'ಏಕ ಪೈಸಾ!' ಕೇಳಿದಳು. ವೆಂಕಟೇಶ ಕೊಡಲೇ ಜೇಬಿನಿಂದ ತೆಗೆದು ಆವಳ ಕೈಯಲ್ಲಿ ಕೊಟ್ಟ.

ಅದು ಪೈಸಾ ಆಗಿದ್ದಿಲ್ಲ.....ಬೆಳ್ಳಿಯ ಒಂದು ರೂಪಾಯಿಯ ನಾಣ್ಯವಾಗಿದ್ದಿತು. ಅವಳು 'ಸಲಾಮ್‌ಸಾ!' ಅನ್ನುತ್ತ ಓಟಕೊಟ್ಟಳು.

ಓಣಿಯಲ್ಲಿಯ ಧೂಳ ಆಕೆಯನ್ನು ಆವರಿಸಿ ಮರೆಮಾಡಿತು.

---

# ಕರೀಮನ ಪಿಟೀಲು

ಕರೀಮನ ಹತ್ತಿರ ಒಂದು ಪಿಟೀಲು ಇದೆ. ಅದನ್ನು ಅವನು ಒಳ್ಳೆ ಮಧುರವಾಗಿ ಬಾರಿಸುತ್ತಾನೆ. ಬಾರಿಸುತ್ತ ಒಮ್ಮೊಮ್ಮೆ ಭಾವಾವೇಶದಲ್ಲಿ ತನ್ನನ್ನು ತಾನು ಮರೆತುಬಿಡುತ್ತಾನೆ. ಕರೀಮನ ಪಿಟೀಲುವಾದವೆಂದರೆ ಊರ ಜನರೆಲ್ಲರೂ ನೆನೆಯುತ್ತಾರೆ. ಒಂದು ಸಲವಲ್ಲ, ನೂರೆಂಟು ಸಲ ಆ ಪಿಟೀಲುವಾದನ ಕೇಳಬೇಕೆನ್ನುತ್ತಾರೆ. ಆ ಪಿಟೀಲನ್ನು ಅವನು ಎಲ್ಲಿಂದ ದೊರಕಿಸಿವನೊ! ಊರವರೆಲ್ಲ ಕರೀಮನನ್ನು ಈ ವಿಷಯದ ಬಗ್ಗೆ ಕೇಳುತ್ತಾರೆ. ಅವನು ಯಾರಿಗೂ ಉತ್ತರ ಕೊಟ್ಟಿಲ್ಲ. ಅವನಿಗೆ ಉತ್ತರ ಕೊಡುವಷ್ಟು ಮನಸ್ಸೂ ಆಗುವದಿಲ್ಲ. ಕೇಳಿದಾಗ ಅವನು ದೊಡ್ಡದಾಗಿ ನಿಟ್ಟುಸಿರು ಬಿಡುತ್ತಾನೆ.

ಆ ಊರು ದೊಡ್ಡ ಪಟ್ಟಣವಾಗಿದ್ದರೆ ಕರೀಮನ ಅದ್ಭುತ ಶಕ್ತಿ ಎಲ್ಲರಿಗೂ ಗೊತ್ತಾಗಿ ಅವನ ಕೀರ್ತಿ ಹರಡಬಹುದಾಗಿತ್ತು! ಅವನು ಆಕಾಶವಾಣಿಯ ತಾರಾಗಣದಲ್ಲಿ ಒಬ್ಬನಾಗಬಹುದಿತ್ತು! ಆದರೆ ಕರೀಮನಿದ್ದ ಊರು ಸಣ್ಣದಾಗಿತ್ತು. ಅದು ಇತ್ತ ಹಳ್ಳಿಯೂ ಆಗಿರಲಿಲ್ಲ. ಅತ್ತ ದೊಡ್ಡ ಪಟ್ಟಣವೂ ಆಗಿರಲಿಲ್ಲ ಆ ಊರಲ್ಲಿ ಕಲಾಭಿರುಚಿಯುಳ್ಳ ರಸಿಕ ಸಿರಿವಂತರು ಮಾತ್ರ ಅನೇಕರಿದ್ದರು.

ಊರಿಗೆ ಶ್ರೀಮಂತರಾದ ರಾವಬಹಾದ್ದೂರ ರಾಜಾರಾಮರಂತೂ ಎಲ್ಲ ಕಲೆಗಳಲ್ಲಿಯೂ ಆಸಕ್ತಿಯುಳ್ಳವರು. ಎಷ್ಟೊ ಸಂದರ್ಭಗಳಲ್ಲಿ ಕರೀಮನನ್ನು ತಮ್ಮ ಮನೆಗೆ ಕರೆಯಿಸಿಕೊಂಡು ಅವನ ಕೊಳಲವಾದನ ಕೇಳಿದ್ದರು. ಆದರೆ ಇತ್ತಿತ್ತಲಾಗಿ ಅವನು ಬಾರಿಸುವ ಪಿಟೀಲುವಾದನ ಮಾತ್ರ ಅವರು ಕೇಳಿದ್ದಿಲ್ಲ. ಕರೀಮನ ಕೊಳಲವಾದನವಿದ್ದ ಹೊತ್ತಿನಲ್ಲಿಯೇ, ಪಿಟೀಲನ್ನು ಬಾರಿಸಲು ಫಕೀರನೆಂಬೊಬ್ಬ ಮತ್ತೊಬ್ಬನು ಅವರ ಮನೆಗೆ ಬರುತ್ತಿದ್ದನು.

ಫಕೀರನು ಪಿಟೀಲನ್ನು ಕಲಿತದ್ದು ತನ್ನ ಸ್ವಂತ ಬುದ್ಧಿಯಿಂದ. ಚಿಕ್ಕವನಿರುವಾಗಲೆ ಸಂಗೀತ ಕಚೇರಿಗಳಿಗೆ ಅನೇಕ ಸಲ ಭೆಟ್ಟಿ ಕೊಡುತ್ತಿದ್ದುದರಿಂದ,

ಅವನಿಗೆ ಸಂಗೀತದ ಗುಂಗು ಬಹಳಿತ್ತು. ಮೊದಲು ಮನೆಯಲ್ಲಿಯೆ ಎಲ್ಲಿಯದೊ ತಂತಿಯನ್ನು ತಂದು, ಯಾವ ಕಟ್ಟಿಗೆ ತುಂಡಿಗೊ ಕಟ್ಟಿ, ಏನಾದರೂ ಹೇಗಾದರೂ ಬಾರಿಸುತ್ತಿದ್ದನು. ಅವನ ತಾಯಿ ಈ ಹುಚ್ಚು ಮಗನನ್ನು ನೋಡಿ ಬೈಯುತ್ತಿದ್ದಳು. ಅವನ್ನೆಲ್ಲ ಬಿಡಿಸಿ, ಕೂಲಿ ಮಾಡಿ ಹೊಟ್ಟೆ ತುಂಬಿಕೊಳ್ಳಲು ಅವನಿಗೆ ಹುರುಪು ಕೊಡುತ್ತಿದ್ದಳು.

ಫಕೀರನು ದೊಡ್ಡವನಾದ. ಅವನೇನು ಶಾಲೆಯಲ್ಲಿ ಕಲಿಯಲಿಲ್ಲ. ಆದರೆ ಸಂಗೀತದ ಗುಂಗನ್ನು ಮಾತ್ರ ಬಿಡಲಿಲ್ಲ. ಯಾರಾದರೂ ಊರಲ್ಲಿ ಸಂಗೀತದ ಸಭೆ ಏರ್ಪಡಿಸಿದರೆ ಅವನು ಅಲ್ಲಿಗೆ ತಪ್ಪದೇ ಹೋಗುತ್ತಿದ್ದನು. ತನ್ನ ಕೂಲಿಯ ನೆನಪೂ ಅವನಿಗೆ ಇರುತ್ತಿರಲಿಲ್ಲ.

ಆ ಊರಿಗೆ ಒಬ್ಬ ಹೊಸ ಸರಕಾರಿ ಡಾಕ್ಟರರು ಆಗಮಿಸಿದ್ದರು. ಫಕೀರನು ಅವರ ಮರ್ಜಿ ಸಂಪಾದಿಸಿ, ಅವರಲ್ಲಿಯೆ ನೌಕರಿಗಾಗಿ ನೆಲೆಸಿದನು. ಡಾಕ್ಟರರ ಮಗಳು ಸುಧಾರಿಸಿದವಳು. ಅವಳಿಗೆ ಸಂಗೀತವನ್ನು ಕಲಿಸಲು ಒಬ್ಬ ಸಂಗೀತ ಗುರುಗಳು ಅಲ್ಲಿಗೆ ಬರುತ್ತಿದ್ದರು. ಅವರು ಸಂಜೆ ಏಳು ಗಂಟೆಗೆ ಅಲ್ಲಿಗೆ ಬರುವ ವೇಳೆ. ಆ ವೇಳೆಗೆ ಫಕೀರನ ಕೆಲಸವೆಲ್ಲವೂ ಮುಗಿದು ಅವನು ತನ್ನ ಮನೆಗೆ ಹೋಗಬಹುದಾಗಿತ್ತು. ಆದರೆ ಹಲವು ಕೆಲಸಗಳ ನೆವವೊಡ್ಡಿ ಅವನು ಅಲ್ಲಿಯೆ ಇರುತ್ತಿದ್ದ. ಅವನಿಗೆ ಸಂಗೀತದ ಊಟ ಬೇಕಾಗಿರುತ್ತಿತ್ತು.

ಒಂದು ತಿಂಗಳ ಕೊನೆಗೆ ಡಾಕ್ಟರರು ಫಕೀರನ ಪಗಾರ ಕೊಡಲು ಕರೆದರು. ಅವನು ರೂಪಾಯಿಗಳನ್ನು ಇಸಗೊಳ್ಳಲಿಲ್ಲ. ಡಾಕ್ಟರರಿಗೆ ಆಶ್ಚರ್ಯವಾಯಿತು. "ಇದೇನು ? ಪುಕ್ಕಟೆಯಾಗಿ ಇಲ್ಲಿ ದುಡಿಯುವೆಯಾ ? ನಿನ್ನ ಸಂಸಾರ ಹೇಗೆ ಸಾಗುವದು ?" ಎಂದು ಕೇಳಿದರು.

"ರಾಯರೆ, ಈ ಬಾರಿ ನನಗೊಂದು ಪಿಟೀಲು ಕೊಡಿಸಿರಿ." ಎಂದು ಮಾರುತ್ತರ ಕೊಟ್ಟ. ಅಷ್ಟು ಹೇಳಬೇಕಾದರೆ ಅವನ ಮೈಯೆಲ್ಲ ನಡುಗುತ್ತಿತ್ತು.

ಡಾಕ್ಟರರು ಅಚ್ಚರಿಯಿಂದ ಸ್ತಂಭೀಭೂತರಾದರು. ಅದರಲ್ಲಿಯೇ ಅವರ ಕುತೂಹಲವೂ ಕೆರಳಿದಂತಾಯಿತು. ಒಂದೆರಡು ದಿನಗಳನಂತರ ತಮ್ಮ ಮಗಳ ಪಿಟೀಲನ್ನೆ ಅವನಿಗೆ ಬಹುಮಾನವಾಗಿ ಕೊಟ್ಟುಬಿಟ್ಟರು.

ಆ ಪಿಟೀಲನ್ನು ಕಂಡಕೂಡಲೆ ಫಕೀರನು ಹಿರಿಹಿರಿ ಹಿಗ್ಗಿದನು. ಅದನ್ನು ದೇವರಂತೆ ಪೂಜಿಸಬೇಕೆಂದು ಅವನಿಗೆನಿಸುತ್ತಿತ್ತು. ಮೊದಲ ದಿನ ಅದನ್ನು

ಊರ ಹೊರಗಿನ ತನ್ನ ಚಿಕ್ಕದಾದ ಗುಡಿಸಲಲ್ಲಿ ತಂದಿಟ್ಟಾಗಂತೂ ಅವನ ಉತ್ಸಾಹಕ್ಕೆ ಮೇರೆಯೇ ಇರಲಿಲ್ಲ. ರಮುಜಾನ ಮತ್ತು ಈದ ಹಬ್ಬದಲ್ಲಿಯೂ ಅವನಿಗೆ ಇಷ್ಟು ಚೈತನ್ಯ ಬಂದಿರಲಿಲ್ಲ. ಆ ಪಿಟೀಲನ್ನು ತಂಮು ಬಾರಿಸಿಯೇ ಬಾರಿಸಿದನು. ಆ ಗುಡಿಸಲಿನಲ್ಲಿ ಓಡಾಡುವ ಮೂವತ್ತು ವರ್ಷದ ಹೆಂಡತಿ ಅವನ ಹುಚ್ಚುತನವನ್ನು ನೋಡಿ ಸಿಟ್ಟಿನಿಂದ ಕೆಂಡಕಾರಿದರೂ, ಅದು ಅವನಿಗೆ ತಾಕಲೇ ಇಲ್ಲ

ಕರೀಮನು ರಾವಬಹದ್ದೂರ ರಾಜಾರಾಯರ ಉದಾರ ಆಶ್ರಯಿಂದದಿ ಬೇಗನೆ ಪ್ರಸಿದ್ಧಿಯನ್ನು ಪಡೆದ. ತನ್ನದೊಂದು ವೃಂದವಾದನವನ್ನು ಮಾಡಿ ಊರಲ್ಲಿ ಎಲ್ಲಕಡೆಗೂ ತನ್ನ ಸಂಗೀತ ಕಾರ್ಯಕ್ರಮ ಏರ್ಪಡಿಸುತ್ತಿದ್ದ. ಮದುವೆ ಮುಂತಾದ ಸಮಾರಂಭಗಳಲ್ಲಿಯಂತೂ ಕರೀಮನ ವೃಂದವಾದನ ಕಾರ್ಯಕ್ರಮವು ನಿಶ್ಚಿತವಾಗಿ ಇರುತ್ತಿತ್ತು.

ಒಬ್ಬ ಪಿಟೀಲು ವಾದಕನಾಗಿ ಫಕೀರನು ಕರೀಮನ ಸಂಗೀತಗುಂಪಿಗೆ ಸೇರಿಮದು ಡಾಕ್ಟರರ ವಶೀಲಿಯಿಂದಲೆ. ಡಾಕ್ಟರರು ತಮ್ಮ ಮನೆಯಲ್ಲಿ ನಡೆದ ವಿಚಿತ್ರ ಚಾಕರನ ಪ್ರಸ್ತಾಪವನ್ನು ರಾವಬಹದ್ದೂರರ ಎದುರು ಎತ್ತಿದರು. ಅವನ ಪಿಟೀಲುವಾದನದ ಹುಚ್ಚನ್ನೂ ಬಣ್ಣಿಸಿದರು. ರಾವಬಹದ್ದೂರ ರಾಜಾ ರಾವರಿಗೂ ಸಂಗೀತವೆಂದರೆ ಹುಚ್ಚು. ಕೂಡಲೇ ಫಕೀರನಿಗೆ ಕರೆಬಂದಿತು. ಸಂಗೀತ ಗುಂಪಿಗೆ ಅವನನ್ನು ಸೇರಿಸಿಯೂ ಆಯಿತು.

ಗುಣಿಯು ಗುಣವನ್ನು ಬೇಗ ಕಂಡುಹಿಡಿಯುವನಲ್ಲವೆ ? ಕರೀಮನು ಫಕೀರನ ಕಲಾಕೌಶಲ್ಯವನ್ನು ತಿಳಿಯಲು ಬಹಳದಿನ ಹಿಡಿಯಲಿಲ್ಲ. ಅವನು ಪಿಟೀಲನ್ನು ಬಾರಿಸುವ ಕಲೆಯು ಅಲ್ಲಾನಕೃಪೆಯಿಂದ ಬಂದು, ಹುಟ್ಟುಗುಣ ವಾಗಿದೆಯೆಂದು ಅವನಿಗೆ ಮನದಟ್ಟಾಯಿತು. ಅವನಿಂದ ತನ್ನ ವೃಂದವಾ ದನಕ್ಕೆ ವಿಶೇಷ ಕಳೆಗಟ್ಟುತ್ತಿದೆಯೆಂಬ ಸತ್ಯವನ್ನು ಅರಿತನು. ಕರೀಮನನ್ನು ತನ್ನ ಮನೆಗೆ ಕರೆಯಿಸಿ, ಅವನಿಗೆ ಪಿಟೀಲನ್ನು ಬಾರಿಸಲು ಹೇಳುತ್ತಿದ್ದನು. ಅವನು ಬಾರಿಸುವಾಗ, ತಾನೊಬ್ಬನೇ ಕುಳಿತು ಸಂಗೀತದ ಅಮೃತ ಸಮಯ ವನ್ನು ಅನುಭವಿಸುತ್ತಿದ್ದನು.

ಒಂದುಸಲ ಸಂಗೀತಕಚೇರಿ ಮುಗಿದನಂತರ. ಫಕೀರನ ಪಿಟೀಲುವಾದನ ವನ್ನು ಕೂಡಿದ ಜನರೆಲ್ಲ ಹೊಗಳಿತು. ಅನೇಕ ಜನರು ಅದ್ಭುತವಾಗಿ ಬಾರಿ

ಸಿದ ಫಕೀರನನ್ನು ಕಾಣಬೇಕೆಂದು, ಗಾಯಕರು ಕುಳಿತ ಪೀಠದೆಡೆಗೆ ನುಗ್ಗ ಹತ್ತಿದರು. ಪೀಠದಮೇಲೆ ನಿಂತ ಕರೀಮನು, ಫಕೀರನನ್ನು ಹೊಗಳುವ ಅನೇಕ ತಲೆಗಳನ್ನು ನೋಡಿದನು. ಆಗ ಅವನ ಶಾಂತಿಸಾಗರದಂತಿದ್ದ ಮನಸ್ಸು ಒಮ್ಮೆಲೆ ಅಲ್ಲೋಲ ಕಲ್ಲೋಲವಾಯಿತು ! ಫಕೀರನ ವಿಶೇಷವಾದ ಶಕ್ತಿ ಅವನಿಗೆ ಗೊತ್ತಿದ್ದರೂ, ಕರೀಮನು ತನಗಿಂತಲೂ ಹೆಚ್ಚು ಜನರಲ್ಲಿ ಕೀರ್ತಿಪಡೆಯುವದು ಬೇಕಾಗಿರಲಿಲ್ಲ.

ಫಕೀರನು ಇಂತಹ ಹೊಗಳಿಕೆಗಳನ್ನು ಎಂದೂ ಬಯಸಿರಲಿಲ್ಲ. ಅವನಿಗೇನೊ ವಿಚಿತ್ರವೆನಿಸಿತು. ಕರೀಮನಿಗೆ ಬೆಟ್ಟಿಯಾಗಿ ಆಮೇಲೆ ಜನಜಂಗುಳಿಯಿಂದ ಪಾರಾಗಿ ಹೋಗಬೇಕೆಂದು ಹೋದನು. "ಹೋಗಿ ಬರುವೆ"ನೆಂದು ಹೇಳಿದರೂ ಕರೀಮನು ಯಾವುದೂ ಪ್ರತ್ಯುತ್ತರ ಕೊಡಲಿಲ್ಲ. ಅವನ ಸಲಾಮಿಗೆ ಪ್ರತಿಸಲಾಮನ್ನು ಕೊಡಲಿಲ್ಲ.

ಜನಸಂದಣಿಯು ಗಲಭೆ ಕೇಳುತ್ತಿದೆ. ಅದರಲ್ಲಿ ಕರೀಮನ ಕೆಂಗಣ್ಣಿನ ಮುಖ ಎದ್ದು ಕಾಣುತ್ತಿದೆ. ಫಕೀರ ಪಿಟೀಲನ್ನು ಬಾರಿಸುತ್ತಾನೆ. ಒಮ್ಮೆಲೆ ಜನರೆಲ್ಲ ಸ್ತಬ್ಧ. ಕರೀಮನ ಕೊಂಕುನೋಟ ಮಾತ್ರ ಹಾಗೆಯೆ. ಅವು ಫಕೀರನ ಎದೆಯನ್ನು ಚುಚ್ಚುತ್ತವೆ.

ಮನೆಯಲ್ಲಿ ಮೇಲಿಂದ ಮೇಲೆ ಬೈಗಿನಿಂದ ಬೆಳಗಿನವರೆಗೂ ಅದೇ ಚಿತ್ರ. 'ಅಯ್ಯೊ' ಎಂದು ಉಸಿರ್ಗರೆದು ಕೈಬೀಸಿದ. ಹತ್ತಿರದಲ್ಲಿಯೆ ಇಟ್ಟ ಪಿಟೀಲಿನ ತಂತಿಗಳು ಒಮ್ಮೆಲೆ 'ಝುಮ್ss' ಎಂದು ಸಪ್ಪಳ ಮಾಡಿದವು. ಒತ್ತೊಟ್ಟಿಗೆ ರಾಶಿಯಾಗಿ ನಿಂತ ನೀರು ತೆರೆಗಳಿಂದ ತೀವ್ರವಾಗಿ ತಿಳಿಯಾದಂತೆ ಅವನ ಮನಸ್ಸಿಗೆ ಭಾಸವಾಯಿತು. ಪಿಟೀಲು ಸ್ವಯಂನುಡಿಸಿಯಾಗಿತ್ತು.

"ಅಯ್ಯೊ, ನಾನು ಸಾಯುತ್ತೇನೆ. ಉಶ್ಯss" ಎಂದು ನರಳುವ ಧ್ವನಿ ಕೇಳಿಸಿತು.

ಫಕೀರನ ಹೆಂಡತಿಗೆ ೩ ೪ ದಿನಗಳಿಂದಲೂ ಜ್ವರವಿದ್ದವು. ಆದರೆ ಅವಳ ಕಾಳಜಿಯನ್ನು ಅವನು ತೆಗೆದುಕೊಂಡಿರಲೆ ಇಲ್ಲ. "ಜ್ವರ ಹೇಗಿವೆ ?" ಎಂದು ಅವನು ಒಂದು ಸಲವಾದರೂ ಕೇಳಿರಲಿಲ್ಲ. ಫಕೀರನ ರೀತಿಯು ಬೇರೆಯದಾಗಿತ್ತು. ಅವನು ಯಾವುದಕ್ಕೂ ವಿಶೇಷ ಕಾಳಜಿಮಾಡಿದವನಲ್ಲ. ಮೊದಲೆ ಅವನಸಂಸಾರ ಬಡತನದ್ದು. ಅದರಲ್ಲಿಯೂ ಅವನ ಇಂಥ ವಿಚಿತ್ರ

ಸ್ವಭಾವದ ಮೂಲಕ ಆ ಸಂಸಾರ ಮತ್ತಷ್ಟು ಹರಕಾಗಿತ್ತು. ತನ್ನ ಚಿಂತೆ ಅತಿಯಾದಾಗ ಪಿಟೀಲನ್ನು ಬಾರಿಸುತ್ತ ಕುಳಿತನೆಂದರೆ ಅವನಿಗೆ ಯಾರದೂ ಅರಿವು ಇರುತ್ತಿರಲಿಲ್ಲ. ಹೆಂಡತಿ ಅವನ ಈ ವಿಚಿತ್ರ ವರ್ತನೆಗೆ ಬೇಸತ್ತು ಹೋಗಿದ್ದಳು. ಡಾಕ್ಟರರ ಮನೆಯಲ್ಲಿಯೇ ಕೆಲಸ ಮಾಡುತ್ತಿದ್ದರೂ ಅವರನ್ನು ಭೆಟ್ಟಿಯಾಗಿ, ಅವರಿಗೆ ಹೆಂಡತಿಯ ಜ್ವರದ ಬಗ್ಗೆ ಹೇಳಿರಲಿಲ್ಲ. ಹೆಂಡತಿಯೂ ಗಂಡನ ಪರೀಕ್ಷೆ ಮಾಡಬೇಕೆಂದು ತನ್ನ ಜ್ವರದ ತಾಪವನ್ನು ಸಹಿಸಿ ೨-೩ ದಿನ ಕೆಲಸ ಮಾಡಿದಳು. ನಾಲ್ಕನೆಯ ದಿನವೇ ಉರಿಯನ್ನು ತಾಳಲಾರದೇ ಚಿಟ್ಟನೆ ಚೀರಿದಳು.

ಆ ಚೀರುವನಿ ಫಕೀರನ ಎದೆಯನ್ನು ಸೀಳಿಬಿಟ್ಟಿತು. ಕಕ್ಕಾವಿಕ್ಕಿಯಾಗಿ ಅವಳ ಹತ್ತಿರ ಓಡಿಬಂದ. ಅವಳ ಸ್ಪೈದಡನಿ "ಏನು, ಏನದು ?" ಎಂದು ಕೇಳಿದ. ಅವಳು ವಿಶೇಷವಾಗಿ ಯಾವದೂ ಮಾತನಾಡಲಿಲ್ಲ. — "ನಾನು ಸಾಯುವಕಾಲ ಸಮೀಪ ಬಂತು" ಎಂದು ಮಾತ್ರ ಅಂದಳು.

ಫಕೀರನು ಅವಳ ತಲೆಯನ್ನು ತನ್ನ ತೊಡೆಯ ಮೇಲೆ ಇರಿಸಿಕೊಂಡ. ಹಾಗೆಯೇ ಅವಳ ಕೂದಲುಗಳನ್ನು ಸರಿಪಡಿಸುತ್ತಿದ್ದ. ೪-೫ ಬಿಳಿ ಕೂದಲುಗಳು ಅವನ ಕೈಯಲ್ಲಿ ತಾವಾಗಿಯೇ ತೊಡದಿಕೊಂಡು ಬಂದವು. ಅವುಗಳನ್ನು ಒಂದೇ ಸವನೆ ನಿರೀಕ್ಷಿಸಿದ. ಅವನ ಆ ನೋಟ ಅನೇಕ ಮಾತುಗಳನ್ನು ಹೇಳುತ್ತಿದ್ದವು.

ಅಹುದು, ಅವನಿಂದ ಅವಳಿಗೆ ಏನು ಸುಖವಾಯಿತು? ಅವಳು ಬೇಡಿದಂಥ ಯಾವ ವಸ್ತುಗಳನ್ನೂ ಅವನು ತಂದು ಕೊಡಲಿಲ್ಲ. ಅವಳಿಗೆ ಒಂದು ಸಲವಾದರೂ ಸಂತೋಷದಿಂದ ಒಂದು ಸೀರೆಯನ್ನು ತರಿಸಲಿಲ್ಲ ಅವಳನ್ನು ಕೂಡಿಸಿಕೊಂಡು ಬಹಳ ಹೊತ್ತಿನವರೆಗೆ ಎಂದೂ ಮಾತನಾಡಲಿಲ್ಲ. ಮಕ್ಕಳನ್ನು ಆಡಿಸುವ ಸುಯೋಗವಂತೂ ಎಂದೂ ಬರಲಿಲ್ಲ. ಮತ್ತೆ ಆ ಮುರುಕು ಗುಡಿಸಲು ಹಾಗೆಯೇ ಉಳಿಯಿತು.

ಅದೆ ಆ ಕರೀಮನ ಸ್ಥಿತಿ ಹೇಗಿದೆ? ತನ್ನ ಉದ್ಯೋಗದಿಂದ ಒಂದು ಹೆಸರು ಗಳಿಸಿಕೊಂಡಿದ್ದಾನೆ. ಗುಡಿಸಲಿನ ಥಂಟಿನ ಗೋಡೆ ಹೋಗಿ, ಇಟ್ಟಂಗಿ ಗೋಡೆಯಾಯಿತು; ಇಟ್ಟಂಗಿ ಗೋಡೆ ಹೋಗಿ ಕಲ್ಲಿನ ಗೋಡೆಯಾಯಿತು. ಎಂಥ ವಿಜೃಂಭಣೆಯ ಸಂಸಾರ ಅವನದು! ಹೆಂಡತಿ ಮಕ್ಕಳು ಒಂದೇ ಸಮನೆ

ಆ ದೂರ ಬಂಗಲೆಯಲ್ಲಿ ನಲಿಯುತ್ತಿದ್ದಾರೆ ! ಅವನು ಬಾರಿಸುವ ಗಾಯನ ಒಂದೇಸವನೆ ಕೇಳುತ್ತಿದ್ದಾರೆ. ಅಹುದು, ಎಂಥ ದೊಡ್ಡಮನೆ !! ಆ ಮನೆ ಹೆಜ್ಜೆ ಇಡುತ್ತ ಊರ ಮೇಲೆ ಹಾಯ್ದು.... ಫಕೀರನ ಕಣ್ಣಿನ ಹತ್ತಿರವೇ ಬಂದಿತು !

ಆವರೆ ಫಕೀರನ ಕಣ್ಣೆದುರು ಬಿಳಿಗೂದಲುಗಳು ಇದ್ದವು. ತೊಡೆಯ ಮೇಲೆ ಹೆಂಡತಿ ಒಂದೇಸವನೆ ನರಳುತ್ತಿದ್ದಳು. ಚಳಿಯಿಂದ ಮುದುಡಿಕೊಂಡಿದ್ದಳು. ತನ್ನ ಸಂಸಾರದ ಅರಿವು ತನಗಾಗಿ “ ನಡೆ ಡಾಕ್ಟರರ ಕಡೆಗೆ ಹೋಗೋಣ ” ಎಂದನು.

ಒಂದು ಝುಟಕವನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು ದವಾಖಾನೆಗೆ ಹೊರಟನು. ದವಾಖಾನೆಯ ಬಾಗಿಲಿಗೆ ಹೋಗಿ ಡಾಕ್ಟರರಿಗೆ ನಮಸ್ಕಾರ ಮಾಡುವಷ್ಟರಲ್ಲಿಯೆ, ಡಾಕ್ಟರರು ಅವನನ್ನು ಕರೆದು ಒಂದು ಸುದ್ದಿ ಹೇಳಿದರು— “ ಈ ಊರಿಂದ ನಾಳೆಯೆ ಹೊರಡಬೇಕು. ಬೇರೆ ಊರಿಗೆ ನನಗೆ ವರ್ಗವಾಗಿದೆ. ಇಷ್ಟರಲ್ಲಿ ನಿನ್ನದೊಮ್ಮೆ ಪಿಟೀಲುವಾದನ ಆಗಬೇಕು ಶಾರದಮ್ಮ ಕೇಳಬೇಕೆನ್ನುತ್ತಾಳೆ. ”

ಫಕೀರನು ಕೈ ಜೋಡಿಸಿಕೊಂಡು ತಲೆಕೆಳಗೆಹಾಕಿಕೊಂಡು ಹಾಗೆಯೇ ನಿಂತುಬಿಟ್ಟ. ಸ್ವಲ್ಪ ಹೊತ್ತಿನ ನಂತರ “ ನನ್ನ ಹೆಂಡತಿ........ ” ಹೀಗೆನ್ನುವಷ್ಟರಲ್ಲಿ ಆ ಹೆಂಗಸು ಬಾಗಿಲನ್ನು ಸಮೀಪಿಸುತ್ತ ಧೊಪ್ಪನೆ ಕೆಳಗೆ ಬಿದ್ದಳು.

ಜನಾನನು, ಕಂಪೌಂಡರು ಅವಳನ್ನು ಎತ್ತಿ ಮೇಜಿನ ಮೇಲೇ ಮಲಗಿಸಿದರು. ಎಲ್ಲಿಕಡೆಗೂ ಸ್ತಬ್ಧತೆ ! ಗಾಬರಿ !! ಫಕೀರನು ನಿಂತಲ್ಲಿಯೆ ನಿಂತಿದ್ದನು. ಹಲವುನಿಮಿಷಗಳ ನಂತರ ಆ ಹೆಂಗಸನ್ನು ಮನೆಗೆ ಕರೆದೊಯ್ಯಲಾಯಿತು.

“ ಫಕೀರ ಇಷ್ಟು ದಿನವಾದರೂ ನನಗೇಕೆ ಹೇಳಲಿಲ್ಲ ? ವಿಷಮ ಜ್ವರ! ನಾಡಿ ಚೆನ್ನಾಗಿಲ್ಲ.... ” ಡಾಕ್ಟರರು ಸ್ವಲ್ಪ ತಡೆದರು. ಆಮೇಲೆ ಫಕೀರನಿಗೆ ಸಮಾಧಾನದ ಮಾತು ಹೇಳಿದರು. “ ಕಾಳಜಿಮಾಡು. ಚೆನ್ನಾಗಿ ಔಷಧ ಕೊಡಿಸು. ನನ್ನ ತರುವಾಯ ಬರುವ ಡಾಕ್ಟರರಿಗೂ ಹೇಳುತ್ತೇನೆ. ”

ಫಕೀರನು ಏನೂ ಮಾತಾಡಲಿಲ್ಲ !

ಅಂದು ಅಮಾವಾಸ್ಯೆಯ ಕಗ್ಗತ್ತಲೆಯ ರಾತ್ರಿ. ಒಂದೇ ಸವನೆ ನರಳುತ್ತಿದ್ದಾಳೆ. ಫಕೀರನು ಯಾವ ರೀತಿಯಿಂದ ಉಪಚರಿಸಿದರೂ ಸಮಾಧಾನವಿಲ್ಲ.

ಒಮ್ಮೆಲೆ ಅವಳು ಒಂದುಸಂಗತಿಯನ್ನು ಕೇಳಿದಳು—“ ನಿಮಗೆ ನೆನಪಿದೆಯೆ? ನಮಗೊಂದು ಸಣ್ಣ ಮಗುಇತ್ತು.... ” ಅವಳಿಗೆ ಬಹಳ ಹಳೆಯ ಸುಖದ ಜೀವ ನೆನಪಾಯಿತು. ಅದೇ ಸಂಗತಿಯನ್ನೇ ಮತ್ತೆ ಬಣ್ಣಿಸಿದಳು. “ ಆ ನದಿಯ ದಂಡೆಯ ಮೇಲಿನ ಅಡವಿಯಲ್ಲಿ ಅದನ್ನು ಆಡಿಸುತ್ತಿದ್ದೆವು. ಆ ಅಡವಿ ಯಿಂದ ತಿರುಗಿ ಬರುವಾಗ ಒಮ್ಮೊಮ್ಮೆ ಕತ್ತಲು ಬಹಳಾಗುತ್ತಿತ್ತು. ನೀವು ಆಗ ದೆವ್ವದ ಕತೆ ಹೇಳಿ ಮತ್ತಿಷ್ಟು ಹೆದರಿಸುತ್ತಿದ್ದಿರಿ. ”

ಫಕೀರನಿಗೆ ಯಾವ ನೆನಪೂ ಬೇಗ ಆಗಲಿಲ್ಲ. ಮಗುವು ಯಾವ ಕಾಲದಲ್ಲಿ ಇತ್ತೋ ಏನೊ ಎಂಬುವಂತಾಗಿತ್ತು ಅವನಿಗೆ. ಈಗಾಗಲೇ ಅವನು ಮೂವತ್ತು ವರ್ಷದ ಮುದುಕನಾಗಿದ್ದ ! ಅವನಿಗೆ ಒಂದು ಮಗುವಾ ದುದು, ಆ ಮಗುವು ೪-೫ ತಿಂಗಳಲ್ಲಿಯೆ ಸ್ವರ್ಗವಾಸಿಯಾದುದು ಯಾವುದರ ಸ್ಮರಣೆಯೂ ಅವನಿಗೆ ತೀವ್ರ ಬರಲಿಲ್ಲ. ತಾನು ತನ್ನ ಹೆಂಡತಿಯ ಸಂಗಡ ಚೇಷ್ಟೆ ಮಾಡಿದುದರ ನೆನಪೂ ಅವನಿಗೆ ವಿಶೇಷವಾಗಿರಲಿಲ್ಲ. ಪಿಟೀಲಿನ ಹುಚ್ಚಿನಲ್ಲಿ ಸಂಸಾರದ ಅನೇಕ ಸಂಗತಿಗಳನ್ನು ಮರೆತುಬಿಡುತ್ತಿದ್ದ. ಅವನ್ನೇನೂ ನೆನಪುಮಾಡಿಕೊಳ್ಳುವಂತೆ ಹೊರಗೆ ನೋಡಿದ. ಭಯಂಕರ ಕತ್ತಲೆ, ಆ ಕತ್ತಲೆ ಅವನನ್ನು ಹೆದರಿಸಿತು ಹೆಂಡತಿ ಇನ್ನೂ ಮಾತನಾಡುತ್ತಲೆ ಇದ್ದಳು· “ ನಾನು ಹೆದರಿದಾಗ ನೀವು ಪಿಟೀಲನ್ನು ಬಾರಿಸಿ........”

ಫಕೀರನು ಪಿಟೀಲನ್ನು ನೋಡಿದ ಆ ರಾತ್ರಿಯೆ ಡಾಕ್ಟರರು ಪಿಟೀ ಲನ್ನು ಬಾರಿಸಲು ತಮ್ಮ ಮನೆಗೆ ಕರೆದಿದ್ದರು.

ಹೆಂಡತಿಯ ಹತ್ತಿರ ಪಿಟೀಲನ್ನು ತಂದು ಒಂದು ಅಪೂರ್ವವಾದ ರಾಗ ಬಾರಿಸಲು ಪ್ರಾರಂಭಿಸಿದ. ಮಿಣಿಮಿಣಿ ದೀಪದ ಬೆಳಕಿನಲ್ಲಿ ಎರಡೇ ವ್ಯಕ್ತಿ ಗಳು ಕಾಣುತ್ತಿವೆ. ಸಂಗೀತದ ನಾದವು ಸುತ್ತಲಿನ ವಾತಾವರಣದಲ್ಲಿ ರೆಕ್ಕೆ ಗೊಂಡು ಹಾರಿತು. ಆ ಸಂಗೀತದ ಗುಂಗಿನಲ್ಲಿ ಫಕೀರನು ತಲ್ಲೀನನಾದನು. ಹೆಂಡತಿಯ ನರಳುವಿಕೆಯು, ಸಂಕಟವು ಕರಗಿಹೋದವು. ಆ ಗಾನದ ನಿರ್ಮಲವಾದ ನೀರ ತೆರೆಗಳಲ್ಲಿ ತೇಲಿ, ಪಿಟೀಲನ್ನು ಒಂದೇ ಸವನೆ ಬಾರಿಸಿದ. ಆ ಶಾಂತಿ ! ಆ ಸುಖ ! ಫಕೀರನು ಎಂದೂ ಅನುಭವಿಸಿರಲಿಲ್ಲ.

ಕಣ್ದೆರೆದು ನೋಡುತ್ತಾನೆ—ಮೂಡಣದ ದಿಗಂತದಲ್ಲಿ ಸೂರ್ಯಕಮಲ ಅರಳಿತ್ತು ! ಹೆಂಡತಿ ಸುಖವಾಗಿ ನಿದ್ರೆಹೋಗಿದ್ದಳು. ಅದು ಸುದೀರ್ಘವಾದ ಸುಖವಾದ ನಿದ್ರೆಯೆ ಆಗಿತ್ತು !!

ಗುಡಿಸಲಿನ ಸುತ್ತುಮುತ್ತಲಿದ್ದ ಮುದುಕಿಯರು ಹಿರಿಯರು ಮನೆಯ ಹತ್ತಿರ ನೆರೆದರು. ಮುಂದಿನ ಕಾರ್ಯವನ್ನೆಲ್ಲ ನೆರವೇರಿಸಿದರು.

ನದಿಯ ತೀರದಲ್ಲಿ ಅವಳ ಹೆಣವನ್ನು ಹುಗಿಯುತ್ತಿರುವಾಗ, ಫಕೀರನಿಗೆ ತನ್ನ ಮಗುವಿನ ನೆನಪಾಯಿತು. ಆ ನದಿಯ ಸಮೀಪದಲ್ಲಿಯೆ ಅಡವಿ ಇದ್ದಿತು. ಆದರೆ ಈಗ ಏನು? ಜೀವನವು ಹೇಗೆ ಹೋಯಿತು? ಮಗುವಿಲ್ಲ, ಆ ಹೆಂಡತಿ ಇಲ್ಲ, ಜನರು ಬದುಕಿರುವದಾದರೂ ಏತಕ್ಕೆ? ದೇಹಗಳನ್ನು ಮಣ್ಣುಪಾಲು ಮಾಡಲಿಕ್ಕೆ? ಮಣ್ಣುಪಾಲಾಗಬೇಕಾದರೆ ಇಷ್ಟು ದಿನವಾದರೂ ಏಕೆ ಬದುಕಿ ಇರಬೇಕು? ಹೆಂಡತಿ ಮಗುಗಳಂತೆ ತಾನೂ ಬಯಲಾಗಬಹುದಿತ್ತಲ್ಲ?

ಜೀವನದ ಸಮಸ್ಯೆಗಳೆಲ್ಲ ಅವನ ತಲೆಯಲ್ಲಿ ಸುಳಿದಾಡಲು ಪ್ರಾರಂಭಿಸಿದುವು. ಆ ವಿಚಾರಗಳು ಮುಂಸೆ ಮುಂದೆ ಸಾಗಿದ ಹಾಗೆಲ್ಲ ಅವನ ನಡೆಗಳು ಮಂದಮಂದವಾಗಿ ಮನೆಯ ಕಡೆ ತೆರಳಿದವು. ಅವನ ಜೊತೆಗಿದ್ದವರು ದಾರಿಯಲ್ಲಿ ಅಲ್ಲಲ್ಲಿ ಕರಗಿದರು.

“ ಈ ಹೊತ್ತು ಸಂಜೆ ಬರಬೇಕು ” ಕರೀಮನು ದಾರಿಯಲ್ಲಿಯೆ ಫಕೀರನನ್ನು ತಡೆದು ಹೇಳಿದ.

ಫಕೀರ ಕತ್ತೆತ್ತಿ ನೋಡಿದ. ಕರೀಮ ಕುಲುಕುಲು ನಗುತ್ತ ಅವನನ್ನು ಮಾತನಾಡಿಸಿದನು.

ಫಕೀರನಿಗೆ ಉತ್ತರ ಕೊಡಲು ಸ್ವಲ್ಪವೂ ಮನಸ್ಸಾಗಲಿಲ್ಲ. “ ಮಾತನಾಡಿಸಬೇಡ ” ಎಂದು ಬಿರುಗಣ್ಣುಗಳಿಂದ ಅವನನ್ನು ನೋಡಿದ. ಅವನ ಎದುರು ನಿಲ್ಲುವದಾಗದೆ, ಒಮ್ಮೆಲೆ ಅಲ್ಲಿಂದ ಹುಚ್ಚೆದ್ದು ಓಡಲು ಪ್ರಾರಂಭಿಸಿದ.

ಕರೀಮನು ಕಕ್ಕಾವಿಕ್ಕಿಯಾಗಿ ಅವನನ್ನು ನೋಡುತ್ತ ನಿಂತ.

ಫಕೀರನು ಓಡುತ್ತಿರುವುದನ್ನು ನೋಡಿ ಹಲವು ನಾಯಿಗಳು ಬೆನ್ನು ಹತ್ತಿದವು. ಓಣಿಯಲ್ಲಿಯ ಹುಡುಗರು ನಾಯಿಗಳನ್ನು ಕಂಡು, ಒದರುತ್ತ ಕಲ್ಲು ಒಗೆಯಹತ್ತಿದರು. ಓಡಿಹೋಗುವ ಮನುಷ್ಯನನ್ನು ನೋಡಿ ಬಿದ್ದು ಬಿದ್ದು ನಗಹತ್ತಿದರು.

ಕರೀಮನು ಈ ದೃಶ್ಯವನ್ನೆಲ್ಲ ನೋಡಿ ದಿಗ್‌ಭ್ರಾಂತನಾದ! ತನ್ನ ಸಂಗೀತ ಮೇಳ ಒಳ್ಳೆಯದಾಗಬೇಕಾಗಿದ್ದರೆ, ಫಕೀರನ ಅವಶ್ಯಕತೆ ಇದೆಯೆಂದು ಅವ

ಸಿಗೆ ಅನಿಸಿತ್ತು. ಅಂತೆಯೆ ತನ್ನ ಮುರಳಿಮಾನವನ್ನು ಮರೆತು, ಅವನಿದ್ದ ಓಣಿಯ ಕಡೆಗೆ ಹೊರಟಿದ್ದ. ಆದರೆ ಫಕೀರ ಹೀಗೇಕೆ ಮಾಡಿದ? ತನ್ನ ಅಸೂಯೆಯ ನೆನಪು ಕರೀಮನಿಗೆ ಒಮ್ಮೆಲೆ ಆಯಿತು.

ಫಕೀರನಿಗೆ ಮನೆಯೆಲ್ಲ ಮನವೆಲ್ಲ ಶೂನ್ಯವಾಗಿತ್ತು. ಗುಡಿಸಲಲ್ಲಿ ಗಾಳಿಯು "ಹೋsss" ಎಂದು ಅಳುತ್ತಿತ್ತು. ಅಕರಾಳ ರೂಪಗಳು ತನ್ನನ್ನು ತಿನ್ನಲು ಬರುತ್ತವೇನೋ ಎನಿಸುತ್ತಿತ್ತು. ಫಕೀರನೊಬ್ಬನೇ ಅಲ್ಲಿ ಕುಳಿತುಕೊಂಡು 'ಗೊಳೋ' ಎಂದು ಅತ್ತನು.

ಬಾಗಿಲಿನ ಬಳಿಯಲ್ಲಿ ನಿಂತ ಕರೀಮನು ಇವನ್ನೆಲ್ಲ ನೋಡಿ ಗಾಬರಿಯಾದನು. ಒಳಗೆ ಬಂದವನೆ ಫಕೀರನ ತಲೆಯನ್ನು ತನ್ನ ಎದೆಗೆ ಅಮುಕಿಕೊಂಡ. ತನ್ನ ಅಪರಾಧವನ್ನು ಮನ್ನಿಸಬೇಕೆಂದು ಕೇಳಿಕೊಳ್ಳುವವರಂತೆ ಅವನನ್ನು ಬಿಗಿಯಾಗಿ ಅಪ್ಪಿಕೊಂಡ.

"ಕರೀಮ, ನಾನು ಇನ್ನು ಬರೋದಿಲ್ಲ. ಪಿಟೀಲನ್ನು ನಿನಗೇ ಕೊಡುತ್ತೇನೆ. ಇಂದೆ ನಾನು ಕೊನೆಯದಾಗಿ ಬಾರಿಸುವೆ."

ಫಕೀರನು ಪಿಟೀಲನ್ನು ತೆಗೆದುಕೊಂಡ. ತನ್ನ ಹೆಂಡತಿಯ ಮುಂದೆ ಬಾರಿಸಿದ ರಾಗವನ್ನು ಮತ್ತೆ ಬಾರಿಸಲು ಪ್ರಾರಂಭಿಸಿದ. ಅವನ ಕಣ್ಣುಗಳಲ್ಲಿ ನೀರು ತುಂಬಿ ತುಳುಕಾಡಿದವು. ಅವು ಮೆಲ್ಲನೆ ಪಿಟೀಲಿನ ಮೇಲೆ ಬೀಳಹತ್ತಿದವು. ಕರೀಮನು ಬಹಳ ಕುತೂಹಲದಿಂದ ಅದನ್ನು ಕೇಳಿದನು. ಅವನ ತಲೆಯ ಮೇಲೆ ಕೈಯಿಟ್ಟು ಅವನನ್ನು ರಮಿಸುವಾಗಲೆಲ್ಲ ಅಂತಃಕರಣವು ಉಕ್ಕೇರಿ ಬರಹತ್ತಿತು. ಕಣ್ಣೀರು ಗಲ್ಲಗಳ ಮೇಲೆ ಹನಿಹನಿಯಾಗಿ ಉದುರುತ್ತಲೆ ಇದ್ದವು.

ಫಕೀರನು ಎಂದೊ ಸ್ವರ್ಗವಾಸಿಯಾಗಿ ಹೋದ. ಅವನ ಪಿಟೀಲು ಮಾತ್ರ ಉಳಿದಿದೆ. ಕರೀಮನು ಅದನ್ನು ಹಿಡಿದನೆಂದರೆ ಫಕೀರನ ಜೀವನವೆಲ್ಲ ಅವನಿಗೆ ನೆನಪಾಗುತ್ತದೆ. ದುಃಖದಾಹವನ್ನೆಲ್ಲ ಪಿಟೀಲಿನ ರಾಗದಲ್ಲಿ ತೇಲಿಸಿ ಬಿಡುತ್ತಾನೆ.

— — —

# ಎಪ್ರಿಲ್ ಒಂದು

ಒಮ್ಮೆಲೇ ಅವನಿಗೆ ಮದುವೆಯಾಗಿಬಿಡಬೇಕೆಂಬ ವಿಚಾರ ಬಂತು. ಮದುವೆಯಾಗುವದೆಂದರೆ ಒಂದು ಸಹಜವಾದ ವಿಚಾರವೆಂದು ಕೆಲವರಿಗೆ ಅನಿಸಬಹುದು. ಆದರೆ ಅವನದು ಮಾತ್ರ ಹಾಗಿರಲಿಲ್ಲ. ಎಲ್ಲರೂ ಅವನಿಗೆ 'ಆಜನ್ಮ ಬ್ರಹ್ಮಚಾರಿ' ಎಂಬ ಬಿರುದನ್ನು ಬಹಳ ಸಂತೋಷದಿಂದ ಅರ್ಪಿಸಿದ್ದರು.

ಕಣ್ಣೆದುರಿಗೆ ಮೇಜಿನ ಮೇಲೆ ಬೆಟ್ಟದಂಥ 'ಫೋಟೋ' ಗಳು ಬಿದ್ದಿವೆ. ಇನ್ನೂ ಎಷ್ಟೋ ಕೆಲಸ ಹಾಗೆಯೇ ಇದೆ. ಒಂದು 'ಫೈಲಿ' ನಲ್ಲಿ ಲೆಖ್ಖವನ್ನು ಬರೆಯುತ್ತಿದ್ದ. ಮದುವೆಯ ಭೃಂಗ ತಲೆಯೊಳಗೆ ಹೊಕ್ಕು ಗುಯ್‌ಗುಟ್ಟಿದ ಕೂಡಲೇ ಅವನ ಉತ್ಸಾಹ ಮಿತಿಮೀರಿತು. ಗಂಟೆ ಬಾರಿಸಿದ.

ಪೇದೆ ಓಡಿಬಂದು ಅವನೆದುರು ನಿಂತ.

ಅವನು ಏನೂ ಮಾತಾಡಲಿಲ್ಲ.

ಕೆಲವು ಹೊತ್ತಿನ ಮೇಲೆ ಪೇದೆ ತಾನಾಗಿ ನುಡಿದ–'ರಾವ-ಸಾ-ಹೇಬ–'

'ಯಾರು ಕರೆದರು ನಿನಗೆ?' ಎಂದು ರಭಸದಿಂದ ನುಡಿದ.

ಪೇದೆ ಪೆದ್ದನಾಗಿ ತಿರುಗಿ ಹೋದ!

ಅವನ ಸಮೀಪ ಕುಳಿತ -ಉಳಿದ ಕೆಲಸಗಾರರು ಇವನನ್ನು ನೋಡಿ ಗಾಬರಿಯಾದರು. "ಯಾಕ್ರೀ ಕೃಷ್ಣಮೂರ್ತಿರಾವ್, ಏನಾಗಿದೆ ಇವತ್ತು?" ಎಂದು ಕೇಳಿದ ಒಬ್ಬ.

"ರಾಧೆಯ ದರ್ಶನವಾಯಿತೇನು ಇವೊತ್ತು" ಎಂದು ಇನ್ನೊಬ್ಬ ನಗುತ್ತ ನುಡಿದ.

"ಮೂರ್ತಿಗಳಿಗೆ ಎಲ್ಲಿ ರಾಧೆಯರಿ?" ಎಂದು ಟೈಪ್ ಹೊಡೆಯುವುದನ್ನು ಬಿಟ್ಟು, ಮುಖವನ್ನು ಹೊರಳಿಸಿ ಇನ್ನೊಬ್ಬ ನುಡಿದ. "ಹನುಮಂತ ದೇವರು ಅವರ ತಲೆ ಮೇಲೆ ಹಸ್ತ ಇಟ್ಟಾರ."

“ ದಿನಾಲೂ ಬಜರಂಗಬಲಿಯ ಪೂಜೆ ಮಾಡತಾರ. ಸುಖಾಮೇವಾ ತಿನತಾರ. ಮೇಲೆ ಬ್ರಹ್ಮಚಾರಿ ಸಿನೆಮಾ ನೋಡತಾರ. ಎಲ್ಲಾ ನಮಗೆ ಗೊತ್ತದ ಬಿಡಿರಿ. ” ಹೀಗೆನ್ನುತ್ತ ಸಮೀಪದಲ್ಲಿ ಕುಳಿತ ಗೋಪಿಯು ಮೂರ್ತಿಯ ಹೆಗಲ ಮೇಲೆ ಕೈ ಹಾಕಿದ.

ಗೋಪಿಯ ದೃಷ್ಟಿ ಮೇಜಿನ ಮೇಲಿದ್ದ ಒಂದು ಪತ್ರದ ಕಡೆಗೆ ಹೊರಳಿತು. ಬಹಳ ಸಲಿಗೆಯಿಂದ ಆ ಪತ್ರವನ್ನು ತೆಗೆದುಕೊಂಡ.

‘ ಓಹೋ ’ ಎನ್ನುವಷ್ಟರಲ್ಲಿ ಮೂರ್ತಿ ಅವನ ಕೈಯಿಂದ ಓಲೆಯನ್ನು ಕೊಸರಿಕೊಂಡ. ‘ ಆಯಿತು. ತಿಳೀತು ಬಿಡ್ರಿ. ಇವೊತ್ತು ಚಹಾ ಆಗಲಿಕ್ಕೇಬೇಕು. ’

‘ ಏನು ? ಏನು ? ’ ಎಂದು ಅವನ ಸುತ್ತು ಇರುವೆಗಳಂತೆ ಮುಕುರಿದರು. ಗೋಪಿ ಅವರ ಕಿವಿಗಳಲ್ಲಿ ಪಿಸುಗುಟ್ಟಿದ.

‘ ನಿಜವಾಗಿಯೂ ಹೆಣ್ಣಿನ ಅಕ್ಷರಗಳೇ ! ’

‘ ಹೌದು. ’

‘ ಏನ್ರಿ ಮೂರ್ತಿರಾವ್, ಈವೊತ್ತು ಬರೇ ಚಹ ಏಕೆ ? ಬಿಸಿ ಬಿಸಿ ಮಸಾಲೆ ದೋಸೆ, ಢೆಡೆ ಎಲ್ಲಾನೂ ಆಗಲೇ ಬೇಕು ’ ಎಂದನೊಬ್ಬ.

ಆಯಿತು, ಮೂರ್ತಿ ಇವರ ಮಾತುಗಳ ತಿರುಗಣಿಯಲ್ಲಿ ಸಿಕ್ಕುಬೀಳಲು ಅವನ ಒಲವಿನ ಸೆಳವೂ ಗರ್‍ರನೆ ತಿರುಗಿಬಿಟ್ಟಿತು. ಮುಗುಳುನಗೆ ನಕ್ಕ. ಅವರೆದುರಿಗೆ ಏನು ಎಲ್ಲವನ್ನೂ ಹೇಳುವದು: “ ಹೌದು, ಅಂದರಾಯಿತು. ‘ ಕುಡಿಸುತ್ತೇನೆ ಮಹಾರಾಜರೇ, ಮೊದಲು ಈ ಹೊರೆ ಕೆಲಸಗಳನ್ನು ಮುಗಿಸೋಣ ’ ಎಂದು ಒಪ್ಪಿಗೆ ಕೊಟ್ಟು ಮಾತನಾಡಿದ.

ಸರಿ. ಗಡಿಯಾರ ಆರು ಬಡಿಯುವುದೇ ತಡ. ಎಲ್ಲರೂ ಆಸನ ಕಂಪವನ್ನು ಅನುಭವಿಸಿದರು. ಪೇದೆಗಳಿಗೆ ಎಲ್ಲಕ್ಕೂ ಸಹಿ ಮಾಡಿಸಲು ಹೇಳಿ, ಮೇಜಿನ ಮೇಲೆ ಎಲ್ಲ ಫೈಲುಗಳನ್ನು ಒಗೆದು ಹೊರ ಹೊರಟರು.

ಅವರು ಹೋಗುವ ಮುಂದೆ ಬ್ಯಾಂಕಿನ ಬಾಗಿಲದಲ್ಲಿಯೇ ನಿಂತ, ಪೆದ್ದನಾಗಿ ತಿರುಗಿದ ಪೇದೆ, ನೂರಾಯೆಂಬತ್ತು ಅಂಶದ ಕೋನದ ವರೆಗೂ ತನ್ನ

ಕಣ್ಣುಗಳನ್ನು ಹೊರಳಿಸಿ ಇವರನ್ನು ನೋಡಿದ ' ಏನೋ ಇರಬೇಕೆಂಬ ' ಸಂಶಯವು ಅವನ ತಲೆಯಲ್ಲಿ ಸುಳಿಯುದೇ ಇರಲಿಲ್ಲ.

೨

ಮಧ್ಯ ರಾತ್ರಿ, ಕಪ್ಪುಬಸಿಗಳ ಇಂಪಾದ ನಿನಾದವೂ, ಸಿನಿಮಾ ಆಕಾಶವಾಣಿಗಳ ಮಧುರ ವಾಣಿಗಳೂ, ಗೆಳೆಯರ ಕೇಕೆಗಳೂ ಸ್ತಬ್ಧವಾಗಿವೆ. ತಂಗಾಳಿ ದಣಿದ ಜನರಿಗೆ ಜೋಗುಳ ಹೇಳುತ್ತಿದೆ, ಹೂಸಿ ಎರೆದುಕೊಂಡು ಶಾಂತವಾಗಿ ಮಲಗಿದಂತೆ ಇಳೆಯು ಶೋಭಿಸುತ್ತಿದ್ದಾಳೆ. ಕುಸುಮ ಕೋಮಲ ತಾರೆಗಳು ಸುಮಗಳಂತೆ ಕಂಗೊಳಿಸುತ್ತಿವೆ.

ಮೂರ್ತಿ ಈ ಸೌಂದರ್ಯವನ್ನೆಲ್ಲ ನೆನೆದ. ಅವನು ಕುಳಿತ ಕಿಟಕಿಯೊಳಗಿನಿಂದ ನಿಸರ್ಗವೆಲ್ಲವೂ ಕಾಣುತ್ತಿತ್ತು. ಇಂಥ ಸೊಬಗನ್ನು ಸವಿಯಲು ತಾನು ಏಕಾಕಿ. ಇಲ್ಲ—ಇವರ ಸಂಪೂರ್ಣ ಅನುಭವವಾಗಲು ತನ್ನಾಕೆ ಬೇಕೆಂದು ಅವನಿಗೆ ಬಲವತ್ತರವಾಗಿ ಅನಿಸಿತು.

ಈಗಾಗಳೇ ಅವನಿಗೆ ಮೂವತ್ತು ವರ್ಷಗಳಾಗಿದ್ದವು. ಇಂಥ ರಾತ್ರಿಯನ್ನು ಎಂದಿಗೂ ಅನುಭವಿಸಿರಲಿಲ್ಲ. ಅನೇಕ ಕನ್ಯೆಗಳು ಅವನ ಮನೆಯವರೆಗೆ ಬಿಜಯಂಗೈಯಿಸಿದ್ದವು. ಆ ಕನ್ಯೆಗಳ ಹಿತೈಷಿಗಳು ಇವನಿಗೆ ಚಹಪಾನ ಮಾಡಿಸಿ ಮದುವೆ ಮಾಡಿಕೊಳ್ಳಲು ಒತ್ತಾಯಪಡಿಸಿದ್ದರು. ಇವನ ತಂದೆಯಂತೂ ಸೊಸೆ ಮತ್ತು ಮೊಮ್ಮಗನನ್ನು ಕಾಣಲಿಲ್ಲವೆಂದು ಅವೇ ಶಬ್ದಗಳನ್ನುಚ್ಚರಿಸುತ್ತ ಪ್ರಾಣ ಬಿಟ್ಟಿದ್ದರು. ಆದರೂ ಮೂರ್ತಿಯ ಮನಸ್ಸು ಕರಗಿರಲಿಲ್ಲ.

ಇದಕ್ಕೆ ಕಾರಣಗಳೂ ಇದ್ದವು. ಅವನು ಕಾಲೇಜ ಶಿಕ್ಷಣವನ್ನು ಇಂಟರದಲ್ಲಿಯೇ ಬಿಟ್ಟಿದ್ದರೂ, ಅನೇಕ ಪಾಶ್ಚಿಮಾತ್ಯ ಗ್ರಂಥಗಳನ್ನೋದಿದ್ದ. ಅನೇಕ ಇಂಗ್ಲೀಷು ಚಿತ್ರಗಳನ್ನು ನೋಡಿದ್ದ. ಅವರಂತೆ ತಾನೂ ಇರಬೇಕೆಂಬ ಮಹತ್ವಾಕಾಂಕ್ಷೆ ಅವನಲ್ಲಿದ್ದಿತು. ಅವನಿಗೆ ಬರುವ ಕನ್ಯೆಗಳೆಲ್ಲವೂ ಹಳ್ಳಿಯದಾಗಲೀ, ಅಶಿಕ್ಷಿತರಾಗಲೀ ಅಥವಾ ಕಪ್ಪು ಬಣ್ಣದವಾಗಲೀ ಇರುತ್ತಿದ್ದವು. ಒಮ್ಮೆಯಂತೂ ಕೆಂಡದಲ್ಲಿ ತೊಳೆದ ಬಹಳ ಸುಂದರಿಯಾದ

(ಏಕೆಂದರೆ ' ಸುಂದರಿ ' ಎಂದು ಅವಳ ಹೆಸರು) ಒಂದು ಹುಡುಗಿಯು ಮಾಲೆಯನ್ನು ಹಿಡಿದು ನಿಂತಿದ್ದಳು. ಆ ಸನ್ನಿವೇಶದಿಂದ ಪಾರಾಗಿ ಹೋಗಬೇಕಾದರೆ ಅವನಿಗೆ ಸಾಕು ಬೇಕಾಯಿತು. ಅಂದಿನಿಂದ ಅವನು ಮದುವೆಯ ಮಾತನ್ನೇ ಜನರೆದುರು ಎತ್ತುತ್ತಿರಲಿಲ್ಲ.

ಆದರೆ ತಂದೆ ತೀರಿಕೊಂಡು ಹೋಗಿ, ಮೂರ್ತಿಯೇ ಮನೆಯಲ್ಲಿ ಸಾಮ್ರಾಜ್ಯದ ಒಡೆಯನು.ವಿಧವೆಯಾದ ತಾಯಿಯೊಬ್ಬಳು ಮನೆಯಲ್ಲಿದ್ದಾಳೆ.

ಇವನ ಸಿಡಿನುಡಿಗಳಲ್ಲಿ ಅವಳ ಮಾತುಗಳು ಕುಗ್ಗಿ ಹೋಗುತ್ತಿದ್ದವು. ಮೂವತ್ತು ವರ್ಷಗಳಾಗಿವೆ. ಇನ್ನು ತನ್ನ ಮಗನು ಮುದುಕನಾದಂತೆ. ಯಾರೂ ತಮ್ಮ ಹುಡುಗಿಯರನ್ನು ತೋರಿಸಲು ಬರುವದಿಲ್ಲವೆಂಬ ನಿಶ್ಚಿತ ಅಭಿಪ್ರಾಯ ಅವನ ತಾಯಿಯದಾಗಿತ್ತು. ಆದರೆ ಮೂರ್ತಿಯು ಹಾಗೆಂದಾದರೂ ತಿಳಿದಾನೆ? ಪಶ್ಚಿಮದಲ್ಲಿಯ ಪಂಡಿತರ ಅಭಿಪ್ರಾಯದ ಮೇರೆಗೆ ತಾನಿನ್ನೂ ಬ್ರಹ್ಮಚಾರಿಯಾಗಿರಬೇಕೆಂದೇ ತಿಳಿದುಕೊಂಡಿದ್ದನು.

ಇಲ್ಲಿಯ ಮದುವೆಯ ಪದ್ಧತಿಯ ಬಗ್ಗೆಯಂತೂ ಮೂರ್ತಿಯು ಕೆಂಡ ಕಾರುತ್ತಿದ್ದ. ತಾಯಿತಂದೆಗಳ ಮಾತುಗಳನ್ನು ಕೇಳದಿರುವುದೂ, ಮದುವೆಯಾಗಬೇಕೆಂದು ಹೇಳಿದಾಗ ಆಗದಿರುವುದೂ, ಚಹಪಾನ ಧೂಮ್ರಪಾನಗಳಲ್ಲಿ ಆಸಕ್ತನಾಗಿರುವುದೂ, ಇವೇ ಅವನ ಕ್ರಾಂತಿಯ ಲಕ್ಷಣಗಳಾಗಿದ್ದುವು.

ಇಂಥ ಕ್ರಾಂತಿಕಾರಿ ಯುವಕನಿಗೆ ಸುಶಿಕ್ಷಿತ ಲಲನೆಯರು ಸಹಧರ್ಮಿಣಿಯರಾಗಲು ಬರಬಾರದೇಕೆ? ಇಂಟರ್ ಪರೀಕ್ಷೆಯ ವರೆಗೆ ಕಾಲೇಜದ ಶಿಕ್ಷಣವಾಗಿದೆ. ಮೇಲಾಗಿ ಬ್ಯಾಂಕಿನಲ್ಲಿ ದೊಡ್ಡ ಸಂಬಳದ ಕೆಲಸವಿದೆ.... ಇಂಥ ವರನನ್ನು ಒಬ್ಬ ಕಾಲೇಜಿನಲ್ಲಿಯ ಸ್ತ್ರೀಯು ಮದುವೆಯಾಗುವುದಾದರೆ ಅಚ್ಚರಿಯ ಮಾತೆ! ಅಂತೆಯೇ ಮೂರ್ತಿಯು ೨-೩ಸಲ ಆ ಪತ್ರವನ್ನು ತಿರುವಿ ತಿರುವಿ ಓದಿದನು. ಮತ್ತೂ ಒಮ್ಮೆ ಓದಬೇಕೆನಿಸಿತು, ಬಾಗಿಲನ್ನು ಇಕ್ಕಿಕೊಂಡು ಬಂದು ಗಟ್ಟಿಯಾಗಿ ಮುಚ್ಚಿದ. ವಿದ್ಯುದ್ದೀಪವನ್ನು ತನ್ನ ಹಾಸಿಗೆಯ ಹತ್ತಿರವೇ ಎಳೆದುಕೊಂಡ. ಜೋಡು ತಲೆದಿಂಬುಗಳನ್ನು ತಲೆಗೆ ಇಂಬಾಗಿ ಇಟ್ಟುಕೊಂಡ. ಬಹಳ ಆಸ್ಥೆಯಿಂದ ಪತ್ರವನ್ನು ಓದಲು ಆರಂಭಿಸಿದ. ಅದು ಇಂಗ್ಲೀಷಿನಲ್ಲಿತ್ತು. ಅದನ್ನಿಲ್ಲಿ ಕನ್ನಡದಲ್ಲಿ ಕೊಡಲಾಗಿದೆ.—:—

ಪೂನಾ
೨೩ ಮಾರ್ಚ್, ೪೪

ಪ್ರಿಯ ಮೂರ್ತಿರಾವ್,

ನೀವೇನು ನನಗೆ ಅಪರಿಚಿತರೆಂದು ತೋರುವದಿಲ್ಲ. ನಿನ್ನೆ ನಿಮ್ಮ ಗೆಳೆಯರಾದ ನಾಗೇಶರಾಯರು ನನಗೆ ಭೆಟ್ಟಿಯಾಗಿದ್ದರು. ನಿಮ್ಮ ಬಗ್ಗೆ ಎಲ್ಲ ಸುದ್ದಿಗಳನ್ನೂ ಹೇಳಿದರು. ಇದಕ್ಕೂ ಮೊದಲೇ ನಿಮ್ಮ ಪ್ರಖ್ಯಾತಿಯ ಬಗ್ಗೆ ಎಷ್ಟೋ ಸುದ್ದಿಗಳನ್ನು ಅನೇಕರಿಂದ ಕೇಳಿರುವೆ. ಸ್ವಾತಂತ್ರ್ಯದ ರಕ್ತವು ನಿಮ್ಮ ನಾಳನಾಳಗಳಲ್ಲಿ ಹರಿಯುತ್ತಿದೆಯೆಂದು ನನಗೆ ಪೂರ್ಣ ವಿಶ್ವಾಸವಿದೆ. ಛೀ! ಹಿಂದೂಸ್ತಾನದ ಯುವಕರು ಮದುವೆಯ ಸಂಬಂಧದಲ್ಲಿ ಹಿರಿಯರ ಮಾತುಗಳಿಗೆ ಬಲಿಬೀಳುವವನ್ನು ಕಂಡು ನನಗೆ ಹೇಸಿಕೆಯಾಗಿದೆ. ಆಂಗ್ಲರಂತೆ-ಮದುವೆಯಾಗುವದಕ್ಕಿಂತ ಮೊದಲು, ಭಾರತದಲ್ಲಿಯೂ ಯುವಕ ಯುವತಿಯರು ತಮ್ಮ ಪರಿಚಯವನ್ನು ಮಾಡಿಕೊಳ್ಳಬೇಕು. ಹಲವಾರು ದಿನ ಕೂಡಿ ಕಳೆಯಬೇಕು. ಒಬ್ಬರೊಬ್ಬರಲ್ಲಿ ವಿಶ್ವಾಸ ಹುಟ್ಟಿದ ಮೇಲೆ ಮದುವೆಯಾಗಬೇಕು. ನೀವೂ ಇದೇ ರೀತಿಯಾಗಿ ವಿಚಾರ ಮಾಡುತ್ತಿರುವುದನ್ನು ಕಂಡು ನನಗೆ ಬಹಳ ಸಂತೋಷವಾಗಿದೆ. ಈ ಹಿಗ್ಗು ನನ್ನೆದೆಯ ನಲ್ಗಡಲನ್ನು ತುಂಬಿ ತುಳುಕುತ್ತಿದೆ. ಪ್ರಿಯ ಮೂರ್ತಿರಾವ್, ಒಮ್ಮೆ ಅಗತ್ಯವಾಗಿ ಇಲ್ಲಿಗೆ ಬಂದುಹೋಗಿ. ಈ ಕಡಲಿಗೆ ಹುಣ್ಣಿವೆಯ ಚಂದ್ರನಾಗಿ ಬನ್ನಿ. ನಿಮ್ಮ ದಾರಿಯನ್ನು ಒಂದೇ ಸವನೆ ಪ್ರತೀಕ್ಷಿಸುತ್ತಿರುವೆ. ನಿಮ್ಮ ಭಾವಚಿತ್ರವು ನನ್ನ ಹಸ್ತಗತವಾಗಿದೆ. ಅದನ್ನು ಮೇಜಿನ ಮೇಲೆ ಇಟ್ಟಿದ್ದೇನೆ. ಈಗ, ನಾನು ಪತ್ರ ಬರೆಯುವ ವೇಳೆಗೆ ಅದು ನನ್ನೆದುರಿಗೇ ಇದೆ. ನೀವು ನನ್ನೆದುರಿಗೆ ಮಾತಾಡುವಂತೆ ಭಾಸವಾಗುತ್ತಿದೆ. ಭಾವ ಚಿತ್ರದ ಮೂರ್ತಿ ನನ್ನೆದುರಿಗೇ ಪ್ರತ್ಯಕ್ಷವಾಗಿ ಬಂದು ನಿಂತರೆ? ಅಯ್ಯೋ! ಈ ಚಕ್ರವಾಕಿಯ ವಿರಹವನ್ನು ನೀವು ಎಂದು ಶಾಂತಮಾಡುವಿರಿ! ಬೇಗನೇ ಬನ್ನಿ. ನಾವಿಬ್ಬರೂ ಕೂಡಿ ನಲಿಯೋಣ. ಬಾಳ ಜೇನನ್ನು ಸವಿಯೋಣ. ನನ್ನ ತಂದೆಯವರಿಗೆ ಹೆದರುವ ಕಾರಣವೇ ಇಲ್ಲ. ಅವರು ಹಾಗೇನಾದರೂ ಅಂದರೆ ನಾನು ಮನೆ ಬಿಟ್ಟು ಹೊರಹೊರಡಲು ಸ್ವತಂತ್ರಳಿದ್ದೇನೆ. ನೀವು ಬರುವ ದಿನವನ್ನು ತೀವ್ರವಾಗಿ ತಿಳಿಸಿ.

ನಿಮ್ಮ ಪ್ರೀತಿಯ
ಲಲಿತಾ

ಪತ್ರದಲ್ಲಿಯ ಪ್ರತಿಯೊಂದು ಅಕ್ಷರವೂ ಮೂರ್ತಿಯ ಲಕ್ಷ್ಯವನ್ನು ಎಳೆಯಿತು. ಹುಡುಗಿ ತಾನೇ ಬರೆದಿರುವಳು. ಎಂಥ ಪ್ರೀತಿ! ಜಗತ್ತಿನಲ್ಲಿ ಇದಕ್ಕೂ ಹೆಚ್ಚಿನ ಸಗ್ಗಸೊಗವು ಇರಲು ಸಾಧ್ಯವೇ? ಮೂರ್ತಿಯು ತನ್ನ ಉತ್ತರವನ್ನು ಮನದಲ್ಲಿ ರಚಿಸಿಕೊಂಡನು. 'ಲೆಟರ್ ಪ್ಯಾಡ'ನ್ನು ತೆಗೆದು ಪತ್ರವನ್ನು ಇಂಗ್ಲಿಷಿನಲ್ಲಿ ಬರೆಯಲು ಆರಂಭಿಸಿದ. ಲಲಿತೆಯಷ್ಟು ಕಾವ್ಯಶಕ್ತಿಯನ್ನು ತಾನೂ ತೋರಿಸಲು ಹವಣಿಸಿದ.

೨೫ ಮಾರ್ಚ, ೪೪
............

ಅತ್ಯಂತ ಪ್ರೀತಿಯ ಹಕ್ಕಿಯೇ,

ನಿನ್ನ ೨೩—೩—೪೪ನೇ ಸಾಲಿನ ಪತ್ರವು ಮುಟ್ಟಿತು. ಈ ಪತ್ರದ ಪ್ರಕಾರ ಕೆಳಗೆ ಸಹಿ ಮಾಡಿದ ನಾನು ನಿನ್ನಲ್ಲಿ ಅತ್ಯಂತ ವಿನಯದಿಂದ ವಿಜ್ಞಾಪನೆ ಮಾಡಿಕೊಳ್ಳುವುದೇನಂದರೆ, ನಾನು ರಜೆ ಪಡೆದುಕೊಳ್ಳಬೇಕಾಗುತ್ತದೆ. ಅದಕ್ಕೆ ತಾರು ಬಿಡಲು ಅಲ್ಲಿಯೇ ಇದ್ದ ನಾಗೇಶನಿಗೆ ಜರೂರು ತಿಳಿಸು. ಯಾರಿಗಾದರೂ ಜಡ್ಡಾಗಿರುವುದೆಂದು ಹೇಳು. ಕೊನೆಯವಾರ ಕೆಲಸ ಬಹಳ; ಕೊನೆಯವಾರ ಕೊನೆಯ ದಿನ ಅವನ ತಾರು ಬರಲಿ. ನಾನು ಜರೂರ ಬರುವೆ. ನಿನ್ನನ್ನು ದಿನಾಲು ನೆನೆನೆನೆಸಿ ಜೀವಿಸುತ್ತಿದ್ದೇನೆ. ಇರಲಿ. ನಾನು ಹೇಳಿದಂತೆ ಮಾಡು.

ನಿನ್ನ ಆಜ್ಞಾಧಾರಕ,
ಮೂರ್ತಿ.

ಪತ್ರವನ್ನು ಬರೆದು ಮುಗಿಸಿದಮೇಲೆ ಅವನಿಗೆ ಎಷ್ಟೋ ಸಮಾಧಾನವಾಯಿತು. ದೀಪವನ್ನು ಆರಿಸಿ ಹಾಸಿಗೆಯಲ್ಲಿ ಹೊರಳಿದಾಗ ತಾಯಿಯ ಗಾಢನಿದ್ರೆಯ ಸ್ವರವು ಕೇಳಬರುತ್ತಿತ್ತು.

೩

ಪೇದೆಯು ತಾರನ್ನು ಮೂರ್ತಿಯ ಎದುರಿಗೆ ಇಟ್ಟು ಕೈ ಮುಂದೊಡ್ಡಿದ. ಅದರ ದಾರಿಯನ್ನೇ ಕಾಯುತ್ತಿದ್ದ ಮೂರ್ತಿಯು ಸ್ವಸಂತೋಷದಿಂದ ಬೆಳ್ಳಿಯ ನಾಣ್ಯಗಳನ್ನು ಕೈಯಲ್ಲಿ ತೂರಿದ. ಪೇದೆಯು ಕುಲುಕುಲು ನಗುತ್ತ ಹೋದ.

ಅವನ ಬಳಿ ಕುಳಿತ ಗೋಪಿ ಕೇಳಿದ 'ಯಾವ ತಾರದು?'

'ಬ್ಯಾಂಕಿನ ಸಂಬಂಧ ಏನಾದರೂ ತಾರು ಬಂದಿದ್ದೀತು? ಏನಾದರೂ ಮೂರ್ತಿಗಳು ಕ್ಯಾಷಿರ್!' ಎಂದು ಒಬ್ಬನು ನುಡಿದ.

'ಯಾವ ಬ್ಯಾಂಕು? ಕಾಮರಾಜನ ಬ್ಯಾಂಕಿನದೇನು? ಎಂದು ಇನ್ನೊಬ್ಬ ಕಿಸಿಕಿಸಿ ನಕ್ಕನು.

ಮೂರ್ತಿ ಮುಖವನ್ನು ಸಪ್ಪಗೆ ಮಾಡಿ ಬಹಳ ದುಃಖಿತನಾದವನಂತೆ— ನಟಿಸಿದನು. 'ಇದೆಲ್ಲ ಚೇಷ್ಟೆಯಲ್ಲ. ಅವರಿಗೆ ಜಡ್ಡು ಬಹಳವಾಗಿದೆ. ನಾನು ಊರಿಗೆ ಹೊರಡಲೇಬೇಕು' ಎಂದ.

'ಯಾರಿಗೆ? ಯಾರಿಗೆ?' ಎನ್ನುವಷ್ಟರಲ್ಲಯೇ ಅವನು ಮಾಯವಾದ ಅಲ್ಲಿಂದ. ಅಟ್ಟವನ್ನು ಏರಿದ.

ಗೋಪಿ ಕಣ್ಣು ಹೊರಳಿಸಿ ನಕ್ಕ!

§ § § §

ಬಹಳ ಗಂಭೀರವಾಗಿ ಕುಳಿತ ಮ್ಯಾನೇಜರರು ಮುಗುಳುನಗೆ ನಕ್ಕರು. ಮೂರ್ತಿಗೆ ಅದರ ಅರ್ಥವಾಗಲಿಲ್ಲ. ನಮ್ಮ ತಂದೆಗೆ ಬಹಳ ಜಡ್ಡಂತೆ. ನಾನು ಇಂದು ಹೋಗಲೇಬೇಕು!'

'ಹೌದು, ನೀನೆನ್ನುವದು ನಿಜ. ಆದರೆ ತಾರನ್ನು ಚೆನ್ನಾಗಿ ಓದಿದೆಯಾ?'

ಮತ್ತೇನಾಯಿತೊ ಎಂಬ ಹೆದರಿಕೆಯಿಂದ ನಡಗುತ್ತ ತಾರನ್ನು ಎತ್ತಿ ಹಿಡಿದ. ಮತ್ತೊಮ್ಮೆ ನೋಡಿದ ತಾರಿನಲ್ಲಿ ಈ ರೀತಿಯಾಗಿ ಬರೆದಿತ್ತು. 'ಪೂನಾ ಸೀರಿಯಸ್, ಫಾದರ್ ಸ್ಟಾರ್ಟ್' (ಪುಣೆಗೆ ಜಡ್ಡು ಹೆಚ್ಚಾಗಿದೆ. ತಂದೆಗೆ ಬಾ.)

ಮೂರ್ತಿ ಮುಖ ಮೇಲೆತ್ತುವದರಲ್ಲಿದ್ದ.

'ಆಗಲಿ. ಐದು ದಿನ ರಜೆ ಮಂಜೂರ ಮಾಡುವೆ. ನಿಮ್ಮ ತಂದೆಯ ಪ್ರಕೃತಿಯ ಬಗ್ಗೆ ತಿಳಿಸು.' ಎಂದು ಹೇಳಿದರು ಮ್ಯಾನೇಜರರು.

೪

ಪುಣೆಯಲ್ಲಿ ನಾಗೇಶನು ಬಹು ವಿಜೃಂಭಣೆಯಿಂದ ಮೂರ್ತಿಯನ್ನು ಸ್ವಾಗತಿಸಿದನು. ಲಲಿತೆಯು ನಿಲ್ದಾಣಕ್ಕೆ ಬರುವಳೆಂದು ಮೂರ್ತಿ ಆಶಿಸಿದ್ದ.

ಆದರೆ ನಾಗೇಶನು ತಾನು ಅಲ್ಲಿಗೆ ಕರೆದುಕೊಂಡು ಹೋಗಲು ಬಂದಿರುವುದಾಗಿ ಹೇಳಿದ.

ದಾರಿಯಲ್ಲಿ ಬಹಳ ಮಾತು ನಡೆದವು. 'ಅಲ್ಲ ಮೂರ್ತಿ, ಅಂತೂ ಒಂದನೆಯ ತಾರೀಖಿಗೆ ರಜೆ ಸಿಕ್ಕಿತಲ್ಲಾ!'

'ನಿನ್ನ ಸಹಾಯವೇ ಹೆಚ್ಚಿನದು. ಇಲ್ಲವಾದರೆ ಬಹಳ ಕಷ್ಟ.'

'ಮೊದಲು ನಮ್ಮ ಮನೆಗೆ ಹೋಗೋಣ. ಆ ಮೇಲೆ ಮುಖ ತೊಳೆದು ಕೊಂಡು ಅವರಲ್ಲಿಗೆ ಹೋಗೋಣ.' ಎಂದ ನಾಗೇಶ.

'ಅಲ್ಲಾ........'

'ಈಗೆಲ್ಲಿ ಅಲ್ಲಾನ ಪ್ರಾರ್ಥನೆ' ಎಂದವನೇ ಅವನನ್ನು ಜಗ್ಗಿಕೊಂಡು ಹೋದ.

ಒಂದು ತಾಸಿನಮೇಲೆ ಎಲ್ಲವನ್ನೂ ಮುಗಿಸಿ ಲಲಿತೆಯ ಮನೆಗೆ ಹೋಗಲು ಹೊರಬಿದ್ದರು. ಅಷ್ಟು ಹೊತ್ತಿನವರೆಗೂ ಮೂರ್ತಿಯ ಜೀವ ಹೇಗೊ ಆಗಿತ್ತು. ಅವಳನ್ನು ಕಾಣಲು ಒಂದೇ ಸಮನೆ ಡವಡವಿಸುತ್ತಿತ್ತು.

ಲಲಿತೆಯ ಮನೆಯಲ್ಲಿ ಕಾಲಿಟ್ಟೊಡನೆಯೇ ಒಬ್ಬ ಆಳು ಬಂದು ಕೂಡಲು ತಿಳಿಸಿಹೋದ. ಮೂರ್ತಿ ಸುತ್ತಲೂ ನೋಡಿದ. ಅಲ್ಲಿ ಅನೇಕ ನಟನಟಿಯರ ಚಿತ್ರಗಳಿದ್ದವು. ಹಲವೆಡೆ ನಿಲುಗನ್ನಡಿಗಳಿದ್ದವು. ನೆಲವು ಸ್ವಚ್ಛವಾಗಿಯೂ ತಂಪಾಗಿಯೂ ಇತ್ತು. ಎರಡು ದುಂಡು ಮೇಜುಗಳನ್ನು ನಡುವೆ ಇಟ್ಟಿದ್ದರು ಅವುಗಳ ಮೇಲೆ ಆದೇ ಹರಿದುತಂದ ಗುಲಾಬಿ, ಮಲ್ಲಿಗೆ ಹೂಗಳನ್ನು 'ಹೂವಿನ ಪಾತ್ರೆ'ಯಲ್ಲಿ ಹಾಕಿ ಇಟ್ಟಿದ್ದರು. ಅವುಗಳ ವಾಸನೆ ನೇರವಾಗಿ ಮೂರ್ತಿಯ ಮೂಗಿಗೆ ಬಂದು ತಾಗುತ್ತಿತ್ತು. ತನ್ನ ಜೀವನವು ಧನ್ಯವೆಂದು ಮೂರ್ತಿಗೆ ಅನಿಸಿತು.

ಅಷ್ಟರಲ್ಲಿ ಚಹವನ್ನು ತೆಗೆದುಕೊಂಡು ಆಳುಮನುಷ್ಯ ಬಂದ. ಅದರ ಸಂಗಡ ಬಿಸ್ಕೀಟು ಬ್ರೆಡ್ಡುಗಳೂ ಇದ್ದವು.

ನಾಗೇಶನು ಕಪ್ಪುಗಳಲ್ಲಿ ಚಹವನ್ನು ಹಾಕಲು ಪ್ರಾರಂಭಿಸಿದ. ಮೂರ್ತಿಗೆ ಸ್ವಲ್ಪ ಕಸಿವಿಸಿಯಾದಂತಾಯಿತು. ಆ ಚಹವನ್ನು ಅವಳೇ ತಂದು ಕೊಟ್ಟಿದ್ದರೆ! ಚಹವು ಅವಳ ಹಸ್ತದಿಂದ ಕಪ್ಪಿನಲ್ಲಿ ಬಂದಿದ್ದರೆ! ನಾಗೇಶ

ನನ್ನು ಕೇಳಿಬಿಡೋಣವೆಂದು ಕೇಳಿದ. "ನಾಗೇಶ, ಇನ್ನೂ ಏನೂ ಸುದ್ದಿ ಇಲ್ಲವಲ್ಲ. ?"

"ಅದಕ್ಕೇಕೆ ಅಷ್ಟು ಆತುರ ? ಅದೇ ಕೆಲಸದ ಸಲುವಾಗಿಯೇ ಅಲ್ಲವೇ ನೀನು ಇಲ್ಲಿಗೆ ಬಂದದ್ದು ? ಅವಳಿಗೂ ಲಗ್ನವಾಗುವ ಮನಸ್ಸಿದೆ. ನಿನಗೊಬ್ಬ ನಿಗೇ ಅಲ್ಲ. ನನಗೆಲ್ಲ ಗೊತ್ತಿದೆ. ದಿನಾಲು ನಾನು ಇಲ್ಲಿಗೆ ಬರುತ್ತೇನೆ. ಏನಾದರೂ ಒಳಕೆಲಸ ಇರಬಹುದು. ಅಥವಾ ಮೈ ತೊಳಕೊಳ್ಳುತ್ತಿರಬಹುದು"

ಮೂರ್ತಿ ಸುಮ್ಮನಾದ. ಹಾಗೊಮ್ಮೆ ಹೀಗೊಮ್ಮೆ ನೋಡಿದ. ಒಂದೆರಡು ಸಲ ಕೈಮುರಿದ. ಅಂತೂ ಚಹವನ್ನು ಕುಡಿಯಲು ಪ್ರಾರಂಭಿಸಿದ.

ನಾಗೇಶ ಹೇಳಿದ— "ನಾನೇ ಹೋಗಿ ಕರೆದುಕೊಂಡು ಬರುವೆ. ಏನಪ್ಪಾ ಮೂರ್ತಿ, ನೀನಿನ್ನು ಪುಣೆಯ ಹೆಣ್ಣು ಮಾಡಿಕೊಂಡು ಪುಣೇರಿ ಆಗುವಿ. ಆ ಮೇಲೆ ನಮ್ಮನ್ನು ಎಲ್ಲಿ ಮಾತಾಡಿಸುವಿ ? ಈಗಿನ ಮಾತಾಡುವುದನ್ನೆಲ್ಲಾ ತೀರಿಸಿಬಿಡೋಣ." ಎನ್ನುತ್ತ ಒಳಬಾಗಿಲದ ವರೆಗೆ ಹೋದ. ನಂತರ "ಬೇಕಾದರೆ ಇಬ್ಬರೂ ಕೂಡಿಯೇ ಹೋಗೋಣ—ಅವಳ ಕೋಣೆಗೇ ನಡೆ" ಎಂದ.

ಈ ಮಾತು ಕೇಳುವುದೊಂದೇ ತಡ. ಮೂರ್ತಿಯು ಜಿಗಿದೆದ್ದು ನಿಂತ !

ಒಳಕೋಣೆಯಲ್ಲಿ ನೋಡುತ್ತಾನೆ. ಅಲ್ಲಿ ಗೋಪಿಯು ನಿಂತಿದ್ದ. "ಇದೇನು ಗೋಪಿ, ಇಲ್ಲಿ ಹೇಗೆ ?" ಎಂದು ಮೂರ್ತಿ ಆಶ್ಚರ್ಯದಿಂದ ಕೇಳಿದ.

"ನನಗೂ ರಜೆ ಸಿಕ್ಕಿದೆ. ಬಂದಿದ್ದೇನೆ ಹೆಣ್ಣು ನೋಡಲಿಕ್ಕೆ."

"ಹೆಣ್ಣು ಎಲ್ಲಿಯದು ?"

"ಇಲ್ಲಿಯದೇ—ಎದುರಿನದೇ ?" ಎಂದು ಒಂದು ಫೊಟೋ ಕೊಟ್ಟ.

ಲಲಿತೆಯ ಚಿತ್ರದ ಹಿಂದೆ "ಎಪ್ರಿಲ್ ಫೂಲ್" ಎಂದು ಬರೆದಿತ್ತು !

ಗೋಪಿ ಮತ್ತು ನಾಗೇಶ ಗಹಗಹಿಸಿ ನಕ್ಕರು !

ಮೂರ್ತಿಯ ದೇಹವೆಲ್ಲಾ ನಡುಗುತ್ತಿತ್ತು !!

---

# ಮೋಳದ ಗಾಯಕಿ



ಆಗ ಅವಳಿನ್ನೂ ಚಿಕ್ಕವಳು. ರೂಪದಲ್ಲಿ ರಂಭೆಯಾಗಿದ್ದಳು. ಕಂಠದಲ್ಲಿ ಕೋಗಿಲೆಯಾಗಿದ್ದಳು.

ಒಂದು ದಿವಸ ಅವಳನ್ನು ಅತ್ಯಂತ ಪ್ರೀತಿಯಿಂದ ಆರಾಧಿಸುವ ನೀಲಕಂಠರಾಯರು ಅವಳ 'ಆನಂದವಿಲ್ಲಾ'ದ ಬಂಗ್ಲೆಯಲ್ಲಿಯ ಹೊರಗಿನ ಕೋಣೆಯಲ್ಲಿ ಕುಳಿತಿದ್ದಾರೆ. ಹೊರಗಿನ ರಣರಣ ಬಿಸಿಲು ಸಹಿಸಬಾರದಷ್ಟಿದೆ. ನೀಲಕಂಠರಾಯರು ಹೋಳಿಗೆಯ ಊಟವನ್ನು ಹೊಡೆದುದರಿಂದ, ಬಿಸಿಲಿನ ನೀರಡಿಕೆಯ ತಾಪದಿಂದ ಮನಸ್ಸಿಗೆ ಹೇಗೆ ಹೇಗೊ ಆಗುತ್ತಿದೆ. ಯಾವಾಗ್ಗೆ ಬಿಸಿಲು ತಗ್ಗುವುದೊ, ಯಾವಾಗ್ಗೆ ಇಬ್ಬರೂ ಕೂಡಿ ಸಂಜೆಯ ತಂಗಾಳಿಯಲ್ಲಿ ಹೊರಗೆ ತಿರುಗಾಡಲು ಹೋಗುವೆವೊ ಎಂದು ದಾರಿಕಾಯುತ್ತಿದ್ದಾರೆ.

ಅಷ್ಟರಲ್ಲಿ ಯಾರೊ ಬಾಗಿಲವನ್ನು ತಟ್ಟಿದ ಸಪ್ಪಳವು ಕೇಳಬಂದಿತು. ಕೋಟು ಶರ್ಟುಗಳನ್ನು ತೆಗೆದು, ಧೋತರದ ಮೇಲೆ ಮಲಗಿದ್ದ ರಾಯರು ಚಟ್ಟನೆ ಎದ್ದುನಿಂತು ಯಾರಿರಬಹುದೆಂದು ಕೇಳುತ್ತ ಚಂದುವಿನ ಕಡೆಗೆ ನೋಡಿದರು.

"ಅಂಚೆಯವ ಅಥವಾ ನನ್ನ ಗೆಳತಿಯರಾರಾದರೂ ಇರಬೇಕು" ಎಂದಳು ಗಾಯಕಿ.

ಅಂಚೆಯವನಾಗಲಿ ಅಥವಾ ಅವನ ಗೆಳತಿಯರಾಗಲಿ ತಮ್ಮನ್ನು ನೋಡಿದರೆ ನೀಲಕಂಠರಾಯರಿಗೆ ಏನೂ ಭಯವಿರಲಿಲ್ಲ. ಆದರೂ ಆದಷ್ಟು ಜಾಗರೂಕತೆಯಿಂದ ಇರಬೇಕೆಂದು ಮೈಮೇಲೆ ಬಟ್ಟೆಗಳನ್ನು ಧರಿಸಿಕೊಂಡು ಬಾಜುವಿನ ಕೋಣೆಗೆ ಹೋದರು.

ಚಂಪೂ ಬಾಗಿಲವನ್ನು ತೆರೆಯಹೋದಳು. ನೋಡುತ್ತಾಳೆ—ಅವಳಿಗೆ ಬಹಳ ಆಶ್ಚರ್ಯವಾಯಿತು. ಅಲ್ಲಿ ಅಂಚೆಯವನಿರಲಿಲ್ಲ. ಅಥವಾ ತನ್ನ

ಗೆಳತಿಯರಿರಲಿಲ್ಲ. ಅಪರಿಚಿತ ಹೆಂಗಸೊಬ್ಬಳು ನಿಂತಿದ್ದಾಳೆ. ಚಿಕ್ಕವಳಿದ್ದಾಳೆ, ಚೆಲುವಾಗಿದ್ದಾಳೆ, ಆರ್ಯನಾರಿಯಂತೆ ಉಡುಪನ್ನು ಧರಿಸಿದ್ದಾಳೆ.

ಆ ಹೆಂಗಸು ಕ್ಷೀಣಳಾಗಿದ್ದಳು. ಬಹಳ ಮೆಟ್ಟಿಲುಗಳನ್ನು ಓಡುತ್ತ ಏರಿ ಬಂದವಳಂತೆ ದಮ್ಮುಹತ್ತಿ ಒಂದೇ ಸವನೆ ಜೋರಾಗಿ ಉಸಿರಾಡಿಸುತ್ತಿದ್ದಳು.

"ಏನು ಬೇಕಾಗಿದೆ ?" ಎಂದು ಚಂದೂ ಕೇಳಿದಳು.

ಆ ಹೆಂಗಸು ಬೇಗನೆ ಉತ್ತರ ಕೊಡಲಿಲ್ಲ. ಹೊಸತಿಲವ ಬಳಿಗೆ ಕಾಲಿಟ್ಟು ಸಾವಧಾನವಾಗಿ ಕೋಣೆಯನ್ನು ನೋಡಿದಳು. ದಣುವಿನಿಂದಾಗಲಿ ಅಥವಾ ಯಾವುದಾದರೊಂದು ಬೇನೆಯಿಂದಾಗಲಿ ನಿಲ್ಲಲಾರದೆ ಕೂಡುವಂತೆ ಗೋಡೆಗೆ ಆತುಕೊಂಡು ವಿರಮಿಸಿದಳು. ಆ ಮೇಲೆ ಎಷ್ಟೋ ಹೊತ್ತಿನ ವರೆಗೆ ಬಲಗುಂದಿದ ಅವಳ ತುಟಿಗಳು ಮಾತನಾಡಬೇಕೆಂದು ವ್ಯರ್ಥವಾಗಿ ಪ್ರಯತ್ನಬಟ್ಟವು.

ಕಡೆಗೊಮ್ಮೆ ಕಣ್ಣೀರಿನಿಂದ ತುಂಬಿದ ತನ್ನ ದೊಡ್ಡ ಕೆಂಗಣ್ಣುಗಳನ್ನು ತೆರೆದು ಚಂದೂನನ್ನು ನೋಡುತ್ತ "ನಮ್ಮವರು ಇಲ್ಲೆ ಇರುವರೇನು ?" ಎಂದು ಕೇಳಿದಳು.

ಅವಳ ಮಾತನ್ನು ಕೇಳುತ್ತಲೆ ಚಂದೂ ಗಾಬರಿಯಾದಳು; ಕೈಕಾಲುಗಳು ತಣ್ಣಗಾದವು.

"ನಿಮ್ಮವರೆ ?........ಯಾರು ?" ಎಂದು ನಡಗುತ್ತ ಕೇಳಿದಳು.

"ಅವರು........ನಮ್ಮ........"

"ಇಲ್ಲ........ನನಗೆ........ಯಾರೂ ಗೊತ್ತಿಲ್ಲ."

ಒಂದು ಕ್ಷಣ ಮೌನದಲ್ಲಿಯೆ ಹೋಯಿತು. ಆ ಹೆಂಗಸು ತನ್ನ ಸೀರೆಯ ಸೆರಗನ್ನು ಬಾಡಿದ ತುಟಿಗಳ ಮೇಲೆ ಇಟ್ಟು ಹೃದಯದೊಳಗಿನ ನಡುಗನ್ನು ನಿಲ್ಲಿಸಬೇಕೆಂದು ಉಸಿರನ್ನು ಗಟ್ಟಿಯಾಗಿ ಹಿಡಿದಳು. ಚಂದೂ ಕುತೂಹಲದಿಂದ ಹೆದರಿಕೆಯಿಂದ ಅವಳನ್ನು ದಿಟ್ಟಿಸಿ ನೋಡುತ್ತ ಅಲುಗಾಡದೆ ಕಂಬದಂತೆ ನಿಂತುಬಿಟ್ಟಳು.

"ಅಂತೂ ಅವರು ಇಲ್ಲಿ ಇಲ್ಲವೆ ?" ಎಂದು ಮತ್ತೆ ಆ ಹೆಂಗಸು ಕೇಳಿದಳು. ಈ ಸಲ ಅವಳ ಧ್ವನಿಯಲ್ಲಿ ಬಿಗುವಿತ್ತು. ಹುಚ್ಚುನಗೆಯನ್ನು ನಕ್ಕಳು.

“ ನನಗೆ........ನೀವು ಯಾರನ್ನು ಕೇಳುತ್ತೀರೊ ಗೊತ್ತಾಗಲೊಲ್ಲದು. ”

“ ನೀನು ದುಷ್ಟೆ..........ರಾಕ್ಷಸಿ............” ದೂಷಿಸುವ ನೋಟದಿಂದ ಚಂದೂನನ್ನು ದುರುದುರನೆ ನೋಡುತ್ತ, ಆ ಅಪರಿಚಿತ ಹೆಂಗಸು ಎದುರಾಡಿದಳು. “ ಹೌದು........ಹೌದು........ಕಡೆಗೊಮ್ಮೆ ಹೇಗೆ ಹೇಳಲು ಧೈರ್ಯ ಬರುತ್ತದೆ. ”

ಅವಳ ಮಾತುಗಳು ಚಂದೂನ ಹೃದಯವನ್ನು ನಾಟಿದವು. ಅವಳಿದುರಿಗೆ ತಾನು ಹಾಗೆಯೆ ಇರುವೆನೆಂದೂ ತಿಳಿದುಕೊಂಡಳು. ಆ ಶರೀರವು ಅವಳದು. ಚಂದೂನದು ಹಾಗೆ ಇರಲಿಲ್ಲ. ತನ್ನ ದುಂಡಗಾದ ಕೆಂಪು ಗಲ್ಲಗಳನ್ನು, ಹಣೆಯ ಮೇಲೆಯೂ ಕಿವಿಯ ಮೇಲೆಯೂ ಬಿದ್ದಿರುವ ಕೂದಲುಗಳನ್ನು ನೆನೆಸಿಕೊಂಡು ಚಂದೂಗೆ ನಾಚಿಕೆಯೆನಿಸಿತು. ತಾನು ತೆಳ್ಳಗಿದ್ದರೆ, ಮುಖಕ್ಕೆ ಬಣ್ಣವನ್ನು ಹಚ್ಚಿಕೊಳ್ಳದಿದ್ದರೆ, ಹಣೆಯ ಮೇಲೆ ಕೂದಲುಗಳು ಬೀಳುತ್ತಿರದಿದ್ದರೆ ತಾನು ಅನಾರ್ಯಳೆಂಬ ತೋರಿಕೆಯನ್ನು ಮುಚ್ಚಬಹುದಾಗಿತ್ತೆಂದು ಚಂದೂಗೆ ಅನಿಸಿತು. ಅಪರಿಚಿತಳಾದ ಆ ವಿಚಿತ್ರ ಹೆಂಗಸಿನ ಎದುರಿಗೆ ಏನೂ ನಾಚಿಕೆ ಇಲ್ಲದೆ ಧೈರ್ಯದಿಂದ ನಿಲ್ಲಬಹುದಿತ್ತೆಂದೂ ಭಾವಿಸಿದಳು.

“ ಅವರೆಲ್ಲಿ ? ” ಎಂದು ಆ ಹೆಂಗಸು ಮತ್ತೆ ಕೇಳಿದಳು. “ ಅವರೇನು ಇಲ್ಲಿ ಇರಲಿ ಅಥವಾ ಬಿಡಲಿ........ಅವರೀಗ ನಮ್ಮವರನ್ನು ಹುಡುಕುತ್ತಿದ್ದಾರೆ. ಅವರನ್ನು ಜೇಲಿಗೆ ಹಾಕಬೇಕೆಂದಿದ್ದಾರೆ. ಇಷ್ಟೆಲ್ಲ ಕಾರಭಾರ ನಿನ್ನದೆ. ”

ಆ ಹೆಂಗಸು ಎದ್ದುನಿಂತು ಉದ್ವಿಗ್ನತೆಯಿಂದ ಕೋಣೆಯ ತುಂಬೆಲ್ಲ ಓಡಾಡಿದಳು. ಚಂದೂ ಅವಳನ್ನು ನೋಡಿದಳು, ಗಾಬರಿಗೊಂಡಳು, ಏನು ಮಾಡಬೇಕೆಂಬುವುದು ತಿಳಿಯದಾಯಿತು.

“ ಇವೊತ್ತೆ ಅವರನ್ನು ಜೇಲಿಗೆ ಒಯ್ಯುತ್ತಾರೆ. ” ಹೆಂಗಸು ದುಃಖಿಸಿದಳು. ಆ ದುಃಖದಲ್ಲಿ ಕೋಪದಿಂದ ಪೀಡಿತಳಾದ ಆವೇಶವೂ ಕೇಳಬಂದಿತು.

“ ಅವರಿಗೆ ಇಂಥ ಭಯಂಕರ ಸ್ಥಿತಿಯು ಯಾರಿಂದ ಬಂದಿತೆಂಬುವುದು ಗೊತ್ತು ! ಅಯ್ಯೋ....ರಾಕ್ಷಸಿಯೆ....ಬಿಕ್ಕೆ ಬೇಡುವವಳೆ....” ನಾಲಗೆಯು ತನ್ನ ಕಾಯಕವನ್ನು ಸಾಗಿಸಿತು. ತುಟಿಗಳು ನಡುಗಿದವು. ಒಂದೆ ಸವನೆ ಅವಳು ಮೂಗು ಮುರಿಯುತ್ತಿದ್ದಳು. “ ನನಗೆ ಯಾರು ಸಹಾಯ ಮಾಡು

ವವರಾರು ? ಅಯ್ಯೊ....ನೀನೇ ಹೇಳು ? ನನಗಿಂತ ನೀನು ಸಮರ್ಥಳು. ಆದರೂ ಏನು ! ನನ್ನನ್ನು ನನ್ನ ಮಕ್ಕಳನ್ನು ನೋಡುವವ ಒಬ್ಬನಿದ್ದಾನೆ ! ದೇವರು ಎಲ್ಲರನ್ನು ಕಾಪಾಡುವನು ! ನ್ಯಾಯವನ್ನು ಸಮರ್ಥಿಸುವನು ! ಅತ್ತತ್ತು ನಿದ್ದೆಯಿಲ್ಲದೆ ರಾತ್ರಿಗಳನ್ನು ಕಳೆದಿದ್ದೇನೆ. ನನ್ನ ಕಣ್ಣೀರಿಗೆ ದೇವರು ನಿನ್ನನ್ನು ಶಿಕ್ಷಿಸುವನು. ನನ್ನ ಬಗ್ಗೆ ವಿಚಾರಿಸುವ ಕಾಲವು ಬರುವುದು !.... ''

ಮತ್ತೆ ಮೌನ. ಆ ಹೆಂಗಸು ಸಿಟ್ಟಿನಿಂದ ಕೋಣೆಯ ತುಂಬ ಓಡಾಡಿದಳು. ಇನ್ನೂ ಏನೋ ಭಯಂಕರವಾದುದು ಅವಳಿಂದ ಆಗುವದೆಂದು ಚಂದೂ ನಿರೀಕ್ಷಿಸಿದಳು. ಬಹಳ ಚಕಿತಳಾಗಿ ಶೂನ್ಯದೃಷ್ಟಿಯಿಂದ ಅವಳನ್ನು ನೋಡಿದಳು.

'' ಅಲ್ಲ, ನನಗೇನೂ ಗೊತ್ತಿಲ್ಲ '' ಎಂದು ಚಂದೂ ಒಮ್ಮೆಲೆ ಅತ್ತುಬಿಟ್ಟಳು.

'' ಸುಳ್ಳು ಹೇಳುವಿ '' ಎಂದು ಆ ಹೆಂಗಸು ಚೀರಿದಳು. ಅವಳ ಕಣ್ಣುಗಳಿಂದ ಕೆಂಡದ ಕಿಡಿಗಳು ಹಾರಿದವು. ನನಗೆಲ್ಲವೂ ಗೊತ್ತಿದೆ ! ನಿನ್ನನ್ನು ನಾನು ಬಲ್ಲೆ ! ಈಗೆರಡು ತಿಂಗಳಾಯಿತು. ಅವರು ಪ್ರತಿಯೊಂದು ದಿನವನ್ನು ನಿನ್ನ ಸಂಗಡ ಕಳೆಯುತ್ತಾರೆ. ''

'' ಇರಬಹುದು. ಆ ಮೇಲೆ ? ನನ್ನ ಕಡೆಗೆ ಎಷ್ಟೋ ಜನರು ಬರುತ್ತಾರೆ. ನಾನೇನು ಅವರಿಗೆ ಇಲ್ಲಿಗೆ ಬರಲು ಜುಲುಮೆ ಮಾಡುವದಿಲ್ಲ. ಅವರ ಸ್ವಾತಂತ್ರ್ಯ ಅವರಿಗೆ ಇದ್ದೇ ಇದೆ. ''

'' ಏನೇ ಇರಲಿ. ಇಲ್ಲಿ ಕೇಳು........ಆಫೀಸಿನೊಳಗಿನ ಹಣವು ಕಳೆದಿದೆ. ಅವರು ನಿನ್ನಂಥ ಪ್ರಾಣಿಯ ಸಲುವಾಗಿ ಅಪಹರಿಸಿಕೊಂಡು ಬಂದಿದ್ದಾರೆ ! ನಿನ್ನ ಸಲುವಾಗಿ ಪಾಪ ಮಾಡಿದ್ದಾರೆ ! '' ಚಂದೂನ ಎದುರಿಗೇ ನಿಂತು ಹೀಗೆ ಮಾತನಾಡಬೇಕಾದರೆ ಅವಳ ಧ್ವನಿಯಲ್ಲಿ ನಿಶ್ಚಲತೆ ಇತ್ತು. '' ನೀನು ಯಾವುದೂ ನಿರ್ಬಂಧವಿಲ್ಲದೆ ಇರಬಹುದು. ಆದರೂ ಜನರನ್ನು ನೋಯಿಸುವುದಕ್ಕೆ ಜೀವಿಸುವೆ. ಅವರಿಗೆ ಹೆಂಡತಿಯಿದ್ದಾಳೆ, ಮಕ್ಕಳಿದ್ದಾರೆ... ಅವರನ್ನು ಶಿಕ್ಷಿಸಿ ಜೇಲಿಗೆ ಕಳಿಸಿದರೆ ನಾನೂ ನನ್ನ ಹುಡುಗರದೂ ಏನು ಗತಿ ? ಉಪವಾಸ ಸಾಯುವೆವು ! ಅಯ್ಯೋ........ಆದರೂ ಒಂದು ರೀತಿಯಿಂದ ಅವರನ್ನು ಉಳಿಸಿಕೊಳ್ಳಬಹುದು. ೯೦೦ ರೂಪಾಯಿ ಕೊಟ್ಟರೆ........ ! ''

“ ಅಬ್ಬಾ ! ೯೦೦ ರೂಪಾಯಿಗಳೆ ? ” ಆಶ್ಚರ್ಯದಲ್ಲಿಯೂ ಚಂದೂ ಮೆಲ್ಲಗೆ ಕೇಳಿದಳು. “ ನನಗೆ....ನನಗೇನೂ ಗೊತ್ತಿಲ್ಲ........ನಾನು ಅವುಗಳನ್ನು ತೆಗೆದುಕೊಂಡಿಲ್ಲ. ”

“ ೯೦೦ ರೂಪಾಯಿ ನಿನಗೆ ಕೇಳಲಿಲ್ಲ....ನಿನ್ನ ಹತ್ತಿರ ರೂಪಾಯಿಗಳಿಲ್ಲವೆ? ಇದ್ದರೂ ನಿನ್ನ ರೂಪಾಯಿಗಳು ನನಗೆ ಬೇಕಿಲ್ಲ. ನಾನು ಬೇರೆ ಕೇಳುತ್ತಿದ್ದೇನೆ........ನಿನ್ನಂಥ ಗಾಯಕಿಯರಿಗೆ ಗಂಡಸರು ಬೆಲೆಯುಳ್ಳ ವಸ್ತು ಒಡವೆಗಳನ್ನು ಕೊಡುತ್ತಾರೆ. ನಮ್ಮವರು ಕೊಟ್ಟಷ್ಟನ್ನು ನನಗೆ ತಿರುಗಿ ಕೊಟ್ಟುಬಿಡು. ”

“ ಅಲ್ಲ....ಅವರು ಯಾವ ಕಾಣಿಕೆಯನ್ನೂ ನನಗೆ ಕೊಟ್ಟಿಲ್ಲ ! ” ಚಂದೂ ಏನೂ ತಿಳಿಯದೆ ಅತ್ತಳು.

“ ಆ ಮೇಲೆ ಹಣವೆಲ್ಲವೂ ಎಲ್ಲಿದೆ ? — ನಿಮ್ಮನ್ನು, ನಮ್ಮನ್ನು, ಎಲ್ಲ ಜನರನ್ನು ಹಾಳುಮಾಡಿದ್ದಾರೆ........ಹಣವೆಲ್ಲ ಎಲ್ಲಿ ಹೋಗಿದೆ? ನೀನೆ ಹೇಳು. ಸಿಟ್ಟಿನಿಂದ ಆಡಬಾರದ ಮಾತುಗಳನ್ನು ಆಡಿದ್ದೇನೆ. ನನ್ನ ಮೇಲೆ ನೀನು ಸಿಟ್ಟಾಗಿರಬೇಕು. ಆದರೂ ನನ್ನ ಸ್ಥಿತಿಯು ನಿನಗೆ ಬಂದಿದ್ದರೆ........ವಿಚಾರಿಸಿ ನೋಡು ! ಸುಮ್ಮನೆ ಏಕೆ.... ? ವಸ್ತುಗಳನ್ನು ತಿರುಗಿ ಕೊಟ್ಟುಬಿಡು ! ”

ಚಂದೂ ಭುಜವನ್ನು ಹಾರಿಸಿದಳು. “ ಓಹೋ ! ಆನಂದದಿಂದ ಕೊಡಬಹುದು. ಆದರೆ ದೇವರ ಸಾಕ್ಷಿಯಾಗಿ ಹೇಳುತ್ತೇನೆ, ಆಣೆಮಾಡಿ ಹೇಳುತ್ತೇನೆ, ಆ ನಿನ್ನ ಅವರು ಎಂದಿಗೂ ನನಗೆ ವಸ್ತುಗಳನ್ನು ಕೊಟ್ಟಿಲ್ಲ. ಕೆಲವು ಸಲ........” ಗಾಯಕಿಯು ತಡವರಿಸುತ್ತ ನುಡಿದಳು. “ ಒಂದೆರಡು ಸಣ್ಣ ವಸ್ತುಗಳನ್ನು ತಂದುಕೊಟ್ಟಿದ್ದಾರೆ. ಬೇಕಾದರೆ ಅವುಗಳನ್ನು ತಿರುಗಿ ಕೊಡುವೆನು. ”

ಚಂದೂ ತನ್ನ ‘ಟಾಯಲೆಟ್’ ಮೇಜಿನ ಹತ್ತಿರ ಹೋಗಿ ‘ಡ್ರಾವರು’ ಗಳನ್ನು ಗಕ್ಕನೆ ಜಗ್ಗಿದಳು. ಅಲ್ಲಿರುವ ಒಂದು ಬಂಗಾರದ ಬಳೆಯನ್ನೂ, ಒಂದು ಹರಳುಂಗರವನ್ನೂ ಹೊರಗೆ ತೆಗೆದು “ ಇಗೊ ತೆಗೆದುಕೊಳ್ಳಿ ” ಎಂದು ಆ ಹೆಂಗಸಿನ ಕಡೆಗೆ ಕೊಟ್ಟಳು.

ಆ ಹೆಂಗಸಿನ ಮುಖವು ಅರಳಿತು. ಆ ಗಾಯಕಿಯನ್ನು ರೇಗಿಸಿದ ಪಾಪವೂ ಅವಳ ದೇಹವನ್ನು ನಡುಗಿಸಿತು.

ಅವಳು ನುಡಿದಳು—'ನನಗೆ ಇದೇನು ಕೊಡುತ್ತಿರುವೆ? ಧರ್ಮಾರ್ಥಿಯಾಗಿ ನಿನ್ನ ಕಡೆಗೆ ನಾನು ಬಂದಿಲ್ಲ. ಆದರೆ ನಿನ್ನದೆಲ್ಲವನ್ನು, ಸಮಾಜದ ನಿನ್ನ ಸ್ಥಾನದಿಂದ ನಮ್ಮವರ ಕಡೆಯಿಂದ ಸೆಳೆದುಕೊಂಡ ಆಭರಣಗಳನ್ನು ಕೊಡು........ಹೋದ ಗುರುವಾರ ನಮ್ಮವರ ಸಂಗಡ ನೀನು ಹೊರಟಾಗ ಬೆಲೆಯುಳ್ಳ ಪದಕಗಳನ್ನೂ, ಬಳೆಗಳನ್ನೂ ಮೈಮೇಲೆ ಹಾಕಿಕೊಂಡಿದ್ದಿ. ಸುಳ್ಳೆ ನನ್ನನ್ನು ಹೀಗೆ ಮೋಸಮಾಡುವುದು ಒಳಿತಲ್ಲ. ಕಣ್ಮುಟ್ಟಿ ನೋಡಿದ್ದೇನೆ. ಸುಮ್ಮನೆ ಕೊಟ್ಟುಬಿಡು........ಇದೊಂದು ಕಡೆಯಸಲ ಕೇಳುವೆ.''

ಚಂದೂಗೆ ಇದೆಲ್ಲ ವಿಲಕ್ಷಣವಾಗಿ ಕಂಡಿತು. ''ಆಣೆಮಾಡಿ ಹೇಳುತ್ತೇನೆ. ಈ ಬಳೆಗಳನ್ನು, ಈ ಸಣ್ಣ ಉಂಗುರವನ್ನು ಬಿಟ್ಟರೆ ಅವರು ಮತ್ತೇನನ್ನೂ ತಂದುಕೊಟ್ಟಿಲ್ಲ. ಏನಾದರೂ ಮೇಜವಾನಿಗಳನ್ನು ಮಾತ್ರ ಇಲ್ಲಿ ಮಾಡಿಸುತ್ತಾರೆ.''

''ಮೇಜವಾನಿಯೆ?'' ಆ ಹೆಂಗಸು ಒಮ್ಮೆಲೆ ನಕ್ಕಳು. ''ಮನೆಯಲ್ಲಿ ಮಕ್ಕಳಿಗೆ ತಿನ್ನಲಿಕ್ಕೆ ಏನೂ ಇಲ್ಲ. ಇಲ್ಲಿ ನಿನಗೆ ಮೇಜವಾನಿ!........ ಅಂತೂ ವಸ್ತುಗಳನ್ನು ತಿರುಗಿ ಕೊಡಲು ಒಲ್ಲೆನುವಿ?''

ಉತ್ತರವೇನೂ ಬರಲಿಲ್ಲ. ಆ ಹೆಂಗಸು ಕೆಳಗೆ ಕುಳಿತಳು. ಎಲ್ಲ ಸ್ಥಳವನ್ನು ಬಿರಬಿರನೆ ನೋಡಿದಳು.

ಇನ್ನೇನು ಮಾಡಬೇಕು? ೯೦೦ ರೂಪಾಯಿ ಸಿಗದಿದ್ದರೆ ನೀಲಕಂಠರಾಯರು ಹಾಳಾಗುವರು. ಮಕ್ಕಳು, ಅವಳು ಎಲ್ಲರೂ ಹಾಳಾಗುವರು. ಆ ನೀಚ ಗಾಯಕಿಯನ್ನು ಕೊಲ್ಲಬೇಕೆಂಬ ವಿಚಾರವೂ ಅವಳ ತಲೆಯಲ್ಲಿ ಸುಳಿಯಿತು. ಇಲ್ಲವಾದರೆ ಅವಳಿಗೆ ಸಾಷ್ಟಾಂಗ ನಮಸ್ಕಾರ ಹಾಕಬೇಕು.

ಶೀರೆಯ ಸೆರಗನ್ನು ಮುಖದ ಮೇಲೆ ಸರಿಸಿಕೊಂಡು ಮತ್ತೆ ಬಿಕ್ಕಿಸಲಾರಂಭಿಸಿದಳು.

''ನೀನು ಅವಳ ಗಂಡನ ಜೀವನವನ್ನು ನಾಶಮಾಡಿದೆ. ಅವನ ಬಗ್ಗೆ ಕರುಣೆಯಿಲ್ಲದಿದ್ದರೆ ಅಷ್ಟೆಹೋಯಿತು. ಮಕ್ಕಳನ್ನು ಏಕೆ ಉಳಿಸಬಾರದು?

ಪಾಪ, ಅವೇನು ಮಾಡಿವೆ ?" ಎಂಬ ಮಾತುಗಳನ್ನು ಆ ಹೆಂಗಸಿನ ದುಃಖದ ಉಸಿರುಗಳು ಚಂದೂನ ಕಿವಿಯಲ್ಲಿ ಊದಿದಂತಾಯಿತು.

ಹಸಿವೆಯ ಶೂಲದಿಂದ ದಾರಿಯಲ್ಲಿ ಅಳುತ್ತ ನಿಂತಿರುವ ಚಿಕ್ಕ ಮಕ್ಕಳನ್ನು ಚಂದೂ ನೆನೆದಳು. ಅವಳೂ ಸಹ ಅತ್ತಳು.

"ನಾನೇನು ಮಾಡಬೇಕು ನೀವೆ ಹೇಳಿ? ನಾನು ನೀಚಳೆಂದೂ, ನಿಮ್ಮ ನೀಲಕಂಠರಾಯರನ್ನು ಮುಳುಗಿಸಿದೆನೆಂದೂ ನೀವೆ ಹೇಳುತ್ತಿರುವಿರಿ. ಆದರೆ ದೇವರ ಸಾಕ್ಷಿಯಾಗಿ ಮತ್ತೊಮ್ಮೆ ಹೇಳುತ್ತೇನೆ. ಅಂತಹದಾವುದನ್ನೂ ನಾನು ಮಾಡಿಲ್ಲ........ನಮ್ಮ ಮೇಳದಲ್ಲಿ ಒಬ್ಬಾಕೆ ಇದ್ದಾಳೆ. ಅವಳೊಬ್ಬಳೆ ಒಬ್ಬ ದೊಡ್ಡ ಸಾವುಕಾರನ ಪ್ರೀತಿಯನ್ನು ಪಡೆದಿದ್ದಾಳೆ. ಉಳಿದವರೆಲ್ಲರೂ ಅಷ್ಟಕ್ಕಷ್ಟೆ ಇದ್ದೇವೆ....ನೀಲಕಂಠರಾಯರು ಸುಶಿಕ್ಷಿತರು, ಒಳ್ಳೆ ನಾಗರಿಕರು. ಆದರಿಂದ ಅವರನ್ನು ಇಲ್ಲಿ ಬರಮಾಡಿಕೊಂಡಿದ್ದೇವೆ."

"ಅಯ್ಯೋ, ನನಗೆ ಅಳುವಹಾಗಾಗಿದೆ. ನನ್ನನ್ನೆ ನಾನು ಕೀಳು ಬಗೆಯುತ್ತಿದ್ದೇನೆ. ನನ್ನ ವಸ್ತುಗಳನ್ನು ಕೊಡಬಾರದೆ? ಕೊಟ್ಟುಬಿಡು. ಬೇಕಾದರೆ ನಿನ್ನ ಕಾಲು ಬೀಳುತ್ತೇನೆ."

ಚಂದೂ ಗಾಬರಿಯಿಂದ ಚೀರಿದಳು. ಬೇಡವೆಂದು ಬೇಡಿಕೊಂಡಳು; ಚೆನ್ನಾಗಿ ಮಾತನಾಡುವ ಆ ಬಡಕಲಾದ ಸುಂದರಿಯು ಇನ್ನು ಮೇಲೆ ದರ್ಪದಿಂದ ವೈಭವದಿಂದ ತಾನು ಮೇಲ್ಗೈಯಾಗಿ ಮೇಳದ ಈ ಹುಡಿಗೆಯನ್ನು ಬೇಕಂತಲೆ ಅವಮಾನಿಸಬೇಕೆಂದು ತನ್ನ ಮುಂದೆ ನಿಜವಾಗಿಯೂ ಸಾಗರ ಬೀಳುವಳೆಂದು ಚಂದೂಗೆ ಮನದಟ್ಟಾಯಿತು.

"ಆಗಲಿ, ನಿನ್ನ ವಸ್ತುಗಳನ್ನು ಕೊಡುವೆ" ಕಣ್ಣುಗಳನ್ನು ಒರೆಸಿಕೊಳ್ಳುತ್ತ ಚಂದೂ ಅಂದಳು. "ಆನಂದದಿಂದ ಕೊಡುವೆ. ಆದರಿಷ್ಟೆ ಅವು ನೀಲಕಂಠರಾಯರವಲ್ಲ.........ಹೀಗೆಯೇ ಮತ್ತೊಬ್ಬರಿಂದ ಬಂದಿವೆ."

ಚಂದೂ ಮೇಲಿನ ಡ್ರಾವರನ್ನು ತೆರೆದು ಒಂದು ಮುತ್ತಿನ ಹಾರವನ್ನು ಕೆಲವು ಬಳೆಗಳನ್ನು, ಕೆಲವು ಉಂಗರಗಳನ್ನು ಅವಳ ಕೈಯಲ್ಲಿ ಕೊಟ್ಟಳು.

"ನಿಮಗೆ ಬೇಕಾದರೆ ಇವೆಲ್ಲವನ್ನೂ ತೆಗೆದುಕೊಳ್ಳಿ. ನಿಮ್ಮವರ ಕಡೆಯಿಂದ ಮಾತ್ರ ನನಗೇನೂ ಬಂದಿಲ್ಲ. ಇವನ್ನು ತೆಗೆದುಕೊಂಡು ನೀವೆ

ಸಾವುಕಾರರಾಗಿರಿ,'' ಆ ಹೆಂಗಸಿನ ದೀನ ದೆಶೆಯನ್ನು ನೆನೆದು ಚಂದೂ ಹಾಗೆಯೆ ಮಾತನಾಡಿದಳು. " ನೀವು ಸಾಧ್ವಿಯಾದರೆ ಅವರನ್ನು ಹೊರಗೆ ಬಿಡಬೇಡಿ! ಕಾಪಾಡಿಕೊಳ್ಳಿ! ಅವರಿಗೆ ಇಲ್ಲಿ ಬರಲು ನಾನೇನು ಹೇಳಿರಲಿಲ್ಲ. ತಾವೆ ಬಂದಿದ್ದಾರೆ."

ಕಂಬನಿಗಳಲ್ಲಿಯೆ ಆ ಹೆಂಗಸು ಎಲ್ಲ ಸಾಮಾನುಗಳನ್ನು ನೋಡಿದಳು. " ಇವೆಲ್ಲ ಕೂಡಿ ೯೦೦ ರೂಪಾಯಿ ಆದಾವೆ ?'' ಎಂದು ಉದ್ಗಾರ ತೆಗೆದಳು.

ಚಂದೂ ಬೇಕಂತಲೆ ಕಪಾಟನ್ನು ತೆಗೆದು, ಸಿಗರೇಟಿನ ಡಬ್ಬಿಗಳನ್ನು ಹಾಳೆಗಳನ್ನು ಹೊರಗೆ ಬೀಸಿದಳು. " ನನ್ನಲ್ಲಿ ಏನಿದೆ ?........ಬೇಕಾದರೆ ನೋಡಿಕೊಳ್ಳಿ ?" ಎಂದು ಬರಿದಾದ ಕೈಗಳನ್ನು ಬೀಸಿದಳು.

ಭೆಟ್ಟಿಗೆಂದು ಬಂದ ಆ ಹೆಂಗಸು ನಿಟ್ಟುಸಿರು ಬಿಡುತ್ತ, ನಡುಗುವ ಕೈಗಳಿಂದ ಆ ಎಲ್ಲ ವಸ್ತುಗಳನ್ನು ಒಂದು ವಸ್ತ್ರದಲ್ಲಿ ಕಟ್ಟಿದಳು. ಸಿಟ್ಟಿಂದು ಮಾತನಾಡದೆ ಸುಮ್ಮನೆ ಆ ಸ್ಥಳವನ್ನು ಬಿಟ್ಟು ಹೊರಗೆ ಹೋದಳು.

ಬಾಜುವಿನ ಕೋಣೆಯ ಬಾಗಿಲವು ತೆರೆಯಿತು. ನೀಲಕಂಠರಾಯರು ಹೊರಗೆ ಬಂದರು. ಬಹಳ ಕ್ಷೀಣರಾಗಿದ್ದರು! ಗಾಬರಿಯಿಂದ ತಲೆಯನ್ನು ನಡುಗಿಸುತ್ತಿದ್ದರು! ಯಾವುದೊ ಒಂದು ಕಹಿಯಾದ ಔಷಧ ನುಂಗಿದವರಂತೆ ಮುಖಚರ್ಯೆಯಾಯಿತ್ತು. ಕಂಬನಿಗಳು ಕೆಳಗೆ ಬೀಳಬೇಕೆಂದು ಹವಣಿಸುತ್ತಿದ್ದವು.

ಅವರನ್ನು ನೋಡುತ್ತಲೆ ಚಂದೂ ಅವರ ಮೈಮೇಲೆ ಏರಿಬಂದು "ನನಗೇನು ಕೊಟ್ಟಿರುವಿರಿ? ನಾನೆಂದಾದರೂ ನಿಮಗೇನಾದರೂ ಕೇಳಿರುವೆನೆ ?'' ಎಂದು ಕೇಳಿದಳು.

" ಏನು ಕೊಟ್ಟಿರುವೆನೆ ?.... .......ಕೊಡದಿದ್ದರೆ ಏನಾಯಿತು ?'' ನೀಲಕಂಠರಾಯರು ದರ್ಪದಿಂದ ನುಡಿದರು. " ಅಯ್ಯೋ, ಅವಳು ನಿನ್ನೆದುರು ಅತ್ತಳೆ ? ತನ್ನ ಅಪಮಾನವನ್ನು ಮಾಡಿಕೊಂಡಳೆ ?"

" ನೀವು ನನಗೇನು ಬಹುಮಾನದ ವಸ್ತುಗಳನ್ನು ಕೊಟ್ಟಿರುವಿರೆಂದು ಕೇಳುತ್ತಿದ್ದೇನೆ. ಕೇಳಿಸಿತೆ ?'' ಚಂದೂ ಸಂಕಟದಿಂದ ಒದರಿದಳು.

" ಅಯ್ಯೋ ದೇವರೆ! ಒಳ್ಳೆ ಕುಲದವಳಾದ ಅವಳು.... ಈ ಮೂರ್ಖಿಯ ಕಾಲು ಬೀಳಲು ತಯಾರಾಗಬೇಕೆ! ಇದಕ್ಕೆಲ್ಲ ನಾನೆ ಕಾರಣನು! ನಾನೆ ಹೀಗೆ ಮಾಡಿದೆ! "

ತಲೆಯನ್ನು ಎರಡೂ ಕೈಗಳಲ್ಲಿ ಬಿಗಿಯಾಗಿ ಹಿಡಿದುಕೊಂಡು ದುಃಖಿಸಿದರು.

" ನಾನು ಹೀಗೆ ಮಾಡಬೇಕೆ? ಹೀಗೆಂದಿಗೂ ಮಾಡಲಾರೆ! ಇಲ್ಲ ಮಾಡಲಾರೆ! ಮೂರ್ಖಳೆ, ದೂರ ಹೋಗು........" ಎಂದು ಬಿರುನುಡಿಗಳನ್ನಾಡಿದರು. ಅವರ ಹೃದಯವು ಭಯಂಕರ ಬಡಿದುಕೊಂಡಿತು. ಮೈಯೆಲ್ಲ ನಡುಗಿತು. " ಓಹೋ, ಇವಳಿಗೆ ಆಕೆ ಕಾಲುಬೀಳುವವಳಿದ್ದಳು........... ಅಯ್ಯೋ "...........

ಚಂದೂನನ್ನು ಸಿಟ್ಟಿನಿಂದ ಆಚೆಗೆ ನೂಕಿದರು. ಕೋಟು ಶರ್ಟುಗಳನ್ನು ಹಾಕಿಕೊಂಡು ಬಾಗಿಲವನ್ನು ತೆರೆದು ಬಿರ್ರನೆ ಹೊರಗೆ ಹೊರಟು ಹೋದರು.

ಚಂದೂ ನೆಲದ ಮೇಲೆ ಧೊಪ್ಪನೆ ಬಿದ್ದಳು. ಗೋಳೋ ಎಂದು ಅತ್ತಳು. ಆವೇಶದಲ್ಲಿ ವಸ್ತುಗಳನ್ನು ಕೊಟ್ಟ ಸಂಗತಿ ಅವಳ ಮನಸ್ಸನ್ನು ಮೊದಲೇ ನೋಯಿಸಿತ್ತು. ಇದೇ ಹೊತ್ತಿನಲ್ಲಿ ಮೂರು ವರ್ಷಗಳ ಹಿಂದೆ ಒಬ್ಬವರ್ತಕನು ಏನೂ ಕಾರಣವಿಲ್ಲದೆ ಆಕೆಯನ್ನು ಹೊಡೆದದ್ದನ್ನು ನೆನಿಸಿಕೊಂಡಳು. ನಿರಾಶಳಾಗಿ ಬಿಕ್ಕಿ ಬಿಕ್ಕಿ ಅತ್ತಳು.

---

# ಉದಯ



"ನಿನ್ನ ಹೆಸರೇನು ?"

"ಲಚ್ಮಿ"

"ನಿನ್ನ ಅಡ್ಡ ಹೆಸರು ?"

"ಕುರುಬರ ಅಂತಾರ್ರಿ"

"ನಿನ್ನ ಗಂಡನ ಹೆಸರು ?"

"..................."

"ಏ ಯಜಮಾನ ಆಕೀ ಸಂಗಡ ಬಂದೀ ಅಲ್ಲ. ನೀನರೆ ಹೇಳಸು ಆಕೀ ಗಂಡನ ಹೆಸರು"

"ಹೇಳವಾ, ಗಡಾನೆ ಹೇಳು" ಎಂದು ಯಜಮಾನ ಅವಳಿಗೆ ಕೇಳಿದ.

"..................."

"ರಾಯರ, ಗಂಡನ ಹೆಸರು ಆಕಿ ಹೆಂಗ ಹೇಳಬೇಕರಿ. ನೀವೇ ಹೇಳ್ರಿ ನೋಡೋಣ."

"ನಾ ಏನು ಹೇಳೋದು ? ನಾ ಏನು ಹೆಂಗಸಲ್ಲ. ಇದು ಕಚೇರಿ ಐತಿ, ಕಚೇರಿ. ಕೇಳಿದ ಎಲ್ಲಾ ಪ್ರಶ್ನೆಗೂ ಉತ್ತರಾ ಹೇಳಾಕ ಬೇಕು"

ಲಚ್ಮಿ ಕೆಳಮೊಗವಾಡಿ ನಿಂತುಕೊಂಡಿದ್ದಳು. ಅತ್ತ ಇತ್ತ ನೋಡಿದಳು. "ಬಸಪ್ಪನರಿ" ಎಂದು ಸಾವಧಾನವಾಗಿ ಹೇಳಿದಳು. ಅದನ್ನು ನುಡಿಯುವ ಮುಂದೆ ಅವಳಲ್ಲಿ ಮಿಂಚಿನ ಸಂಚಾರವಾದಂತಾಯಿತು.

"ಹೂಂ............ನಿನ್ನ ಕೆಲಸ ಏನು ?" ಎಂದು ಫಾಯಿಲು ತಿರುವುತ್ತ ಕೇಳಿದ ಕಾರಕೂನ.

ಅವಳು ಮತ್ತೆ ಗಾಬರಿಯಾದಳು. ಆ ಬೆದರುಗಣ್ಣುಗಳನ್ನು ಮೇಲ ಕ್ಕೆತ್ತಿ ಬಲಬದಿಗೆ ನಿಂತ ಯಜಮಾನನನ್ನು ನೋಡಿದಳು.

" ಹೆದರತೀ ಯಾಕ? ಹೇಳಬೇಕಬೇ ಎಲ್ಲಾನೂ " ಎಂದು ಒಡನುಡಿದ ಯಜಮಾನ.

" ಕೂಲಿನ್ರಿ "

" ಬರೋಬ್ಬರ ಆತು. ಏ ಛಪ್ರಾಸಿ....ನಿನ್ನೆ ಪಾರ್ಸಲ್ ಬಂದದಲ್ಲಾ ಅದನ್ನ ತಗೊಂಡು ಬಾ "

ಛಪ್ರಾಸಿ ಓಡಿಹೋಗಿ ಅದನ್ನು ತೆಗೆದುಕೊಂಡು ಬಂದನು. ಕಚೇರಿಯ ಲ್ಲಿದ್ದ ಆ ಕಾರಕೂನರಾಯರು ಅದನ್ನು ಒಡೆದು ಎಲ್ಲವನ್ನು ಬಿಚ್ಚಿ ಒಂದೊಂದೆ ಸಾಮಾನುಗಳನ್ನು ಆ ಹೆಂಗಸಿಗೆ ತೋರಿಸಹತ್ತಿದರು.

" ಇಕಾ, ಇದು ಅವನ ಬ್ಯಾಜ್ಜು....ಇದು ಅವನ ಪರ್ಸ........ಅಂದರ ರೊಕ್ಕದ ಚೀಲ....ಇದು ಅವನ ತಾಯಿತ ಇರಬೇಕು....ಇವು ಕಿಸೆಯೊಳಗಿದ್ದ ಕೆಲವು ಪತ್ರ. "

ಅವೆಲ್ಲ ಸಾಮಾನುಗಳನ್ನು ನೋಡಿ ಲಚ್ಮಿ ಒಮ್ಮೆಲೆ ಅಳತೊಡಗಿದಳು. ಸುತ್ತಲೂ ಕೆಲಸದಲ್ಲಿ ತೊಡಗಿದ್ದ ಜನರು ಈ ರೋದನ ಕೇಳಿ ಒಮ್ಮೆಲೆ ಎಚ್ಚ ತ್ತರು. " ಹಾಕ್ರಿ....ಅವಳನ್ನ ಹೊರಗ ಹಾಕ್ರಿ. ನಮ್ಮ ಕೆಲಸ ಎಲ್ಲಾನು ಕೆಡ್ತಾವ ಇಲ್ಲಿ " ಎಂದು ಕೂಗಿಕೊಂಡರು.

" ಇಲ್ಲ ಬಿಡ್ರಿ, ನಮ್ಮ ಕೆಲಸ ಏನು? ಅದೂ ಅಳೂದ ". ಎಂದು ಒಬ್ಬ ಮಂಗಚೇಷ್ಟೆ ಮಾಡಿದ.

ಲಚ್ಮಿ ಮತ್ತು ಯಜಮಾನ ಆ ಸಾಮಾನುಗಳನ್ನೆಲ್ಲ ಸಾವರಿಸಿಕೊಂಡು ಹೋಗುವ ತಯಾರಿಯಲ್ಲಿದ್ದರು.

" ಹೊಂ... ನಿಂದರು. ಎಲ್ಲಾ ಮುಟ್ಯಾವಂತ ಹೆಬ್ಬಟ್ಟಿನ ಗುರ್ತಾ ಮಾಡು. " ಎಂದು ಹೇಳಿದ ಕಾರಕೂನ.

ಯಜಮಾನ ಅವಳ ಕೈ ಹಿಡಿದು ಹೆಬ್ಬಟ್ಟಿನ ಗುರ್ತಾ ಮಾಡಿಸಿದ. ಅದೇಕೋ ಅವನಿಗೆ ಒಮ್ಮೆಲೆ ವಿದ್ಯುತ್ ಸಂಚಾರವಾದಂತಾಯಿತು. ಅದು

ಹೀಗೇಕೆ ಆಗಬೇಕು? ವಿಚಾರದ ಝರಿಯನ್ನು ಮುಂದೆ ಹರಿಬಿಡದೆ ಕೂಡಲೆ ಮನಸ್ಸನ್ನು ಬಿಗಿಹಿಡಿದ.

"ನೋಡು ಸರಕಾರದವರು ವಿಚಾರ ಮಾಡಿ ನಿನಗೆ ನೀನು ಸಾಯೂ ತನಕ ರುಪಾಯಿ ೧೫ ಕೊಡತಾರ, ನೀ ಮಾತ್ರ ಇನ್ನೊಬ್ಬರನ ಉಡಕೀ ಮಾಡಕೋಬಾರದು ಮತ್ತೆ. ಅಂದರ ಅವರು ಕೊಡತಾರ."

"ಇಲ್ರಿ" ಎಂದು ಗೋಣುಸನ್ನೆಯಿಂದ ಹೇಳುತ್ತ ಅವರಿಬ್ಬರೂ ಕಚೇರಿಯಿಂದ ಹೊರಬಿದ್ದರು.

§ § § §

ಲಚ್ಮಿಗೆ ಆರು ಮೈಲು ನಡೆಯುವುದೆಂದರೆ ನೂರು ಹರದಾರಿ ನಡೆದಂತೆ ಆಗಿತ್ತು. ತನ್ನ ಹಳ್ಳಿಗೆ ಬಂದೊಡನೆ ಮನೆಯಲ್ಲಿ ಕಾಲುಚಾಚಿ ಉಸ್ಸೆಂದು ಬಿದ್ದುಕೊಂಡಳು. ಇಷ್ಟು ಹೊತ್ತಿನ ವರೆಗೆ ಅವಳನ್ನು ಸಮಾಧಾನ ಮಾಡುತ್ತ ಬಂದಿದ್ದ ಯಜಮಾನ ಮತ್ತು ಇನ್ನೊಬ್ಬ ಹೆಂಗಸು ಅವಳ ಸ್ಥಿತಿಯನ್ನು ಕಂಡು ಹೆಚ್ಚಿಗೆ ಮಾತನಾಡಲಾರದೆ ಬಾಗಿಲ ಮುಂದುಮಾಡಿಕೊಂಡು ಹೊರಗೆ ಹೋದರು.

ಅವಳಿಗೆ ಒಬ್ಬಳೇ ಕೂಡುವುದು ಬೇಕಾಗಿತ್ತು. ತನ್ನ ದುಃಖವನ್ನು ಹೆರವರಿಗೆ ಎಷ್ಟೆಂದು ಹೇಳುವುದು! ತನ್ನ ಜೊತೆಗಿದ್ದ ಇಬ್ಬರೂ ಹೊರಗಿನ ಸಂಜೆಯ ಮಬ್ಬುಗತ್ತಲಲ್ಲಿ ಮಾಯವಾದೊಡನೆ, ಲಚ್ಮಿ ತನ್ನ ಮನೆಯ ಬಾಗಿಲನ್ನು ಗಟ್ಟಿಯಾಗಿ ಇಕ್ಕಲು ಹೋದಳು. 'ಜಿಯ್‌ss' ಎಂದು ಬಾಗಿಲವು ಜೋರಾಗಿಯೇ ಕೂಗಿಕೊಂಡಿತು. ಆ ಧ್ವನಿಯು ಲಚ್ಮಿಗೆ ತನ್ನ ಹೃದಯದಲ್ಲಿಯೆ ಯಾರೊ ಕುಳಿತುಕೊಂಡು ಒದರಿದಂತಾಯಿತು. ಎದೆಯನ್ನು ಬಿಗಿಯಾಗಿ ಹಿಡಿದುಕೊಂಡು ಒಳಗೆ ಬಂದಳು. ಅವಳ ವೇದನೆ ನೂರ್ಮಡಿಯಾಗಿ ಚಿಮ್ಮಿತು, ಗೊಳೋ ಎಂದು ಅತ್ತುಬಿಟ್ಟಳು.

ರಾತ್ರಿ ಬಹಳ ಹೊತ್ತಾಗಿದೆ. ಚಿಮಣಿ ದೀಪ ಇನ್ನು ಹಾಗೆಯೇ ಉರಿಯುತ್ತಿದೆ. ಬಾಳಿನ ಕಪ್ಪುಹೊಗೆ ಮೇಲೆ ಸುಳಿಯುತ್ತಿದೆ. ದೀಪದ ಸುತ್ತಲೂ ಕಚೇರಿಯಲ್ಲಿ ಕಂಡ ಸಾಮಾನುಗಳು ಹರಡಿ ಬಿದ್ದಿವೆ. ಲಚ್ಮಿಯು ಒಂದೊಂದೆ

ಸಾಮಾನುಗಳನ್ನು ನೋಡುತ್ತ ಕುಳಿತಿದ್ದಾಳೆ. ಅವಳ ಕಣ್ಣೆದುರಿಗೆ ಎಲ್ಲವೂ ಕಾಳರಾತ್ರಿ.

ಈ ರೀತಿಯಾಗಿ ತನ್ನ ಜೀವಿತವಾಗುವದೆಂದು ಅವಳಿಗೆ ಎಂದೂ ಅನಿಸಿರಲಿಲ್ಲ. ದೈವದ ಲೀಲೆ ಮೊದಲು ಹೇಗೆ ಗೊತ್ತಾಗಬೇಕು! ಇಂದು ತಾಯತ ಒಂದೆ ಉಳಿದಿದೆ. ಆದರೆ ಅದೆ ಕೊರಳಲ್ಲಿ ಶೋಭಿಸುತ್ತಿರುವಾಗ ಎಂಥ ಜೀವ ಅದರಲ್ಲಿತ್ತು! ಅವನೂ ಕೆಲಸವನ್ನು ಮಾಡುತ್ತಿದ್ದ. ಇವಳೂ ಕೆಲಸಕ್ಕೆ ಹೋಗುತ್ತಿದ್ದಳು. ಅವನು ಬಾಗಿ ಹೆಂಟೆಗಳನ್ನು ಎತ್ತಿ ಕೊಡುವಾಗ, ಅದು ಜೀವನದ ಜೋಕಾಲಿ ಜೂಕ ಹಾಕಿದಂತೆ ಜೋತಾಡುತ್ತಿತ್ತು. ಲಚ್ಮಿಯು ಬಹಳ ಉಮೇದಿಯಿಂದ ಆ ಹೆಂಟೆಗಳನ್ನು ಮೇಲಕ್ಕೆ ಸಾಗಿಸುತ್ತಿದ್ದಳು. ಅವನೂ ಯಾವಾಗಲೂ ಕುಲಕುಲು ನಗುತ್ತಿದ್ದ. ಲಚ್ಮಿಯನ್ನು ಮೇಲಿಂದ ಮೇಲೆ ಮಾತಾಡಿಸುತ್ತಿದ್ದ. ಅವಳ ಹತ್ತಿರ ಒಂದು ಸಲ ರೊಟ್ಟಿ ಇಲ್ಲದಿದ್ದರೆ ತನ್ನಲ್ಲಿಯದೆ ತೆಗೆದು ಅವಳಿಗೆ ಕೊಡುತ್ತಿದ್ದ.

ಲಚ್ಮಿಗೆ ದಿನಾಲು ತನ್ನ ಊಟವನ್ನು ತರುವುದು ಹೇಗಾಗಬೇಕು? ಅವಳು ಯಾವಾಗಲೂ ಮೈಗಳ್ಳಿ. ಚಿಕ್ಕವಳಿರುವಾಗಲೆ ಅವಳ ತಾಯಿತಂದೆಗಳು ತೀರಿಹೋದರು. ಅವರ ನೆನಪೂ ಸಹ ಅವಳಿಗಿಲ್ಲ. ಬೀದಿಬೀದಿಯಲ್ಲಿ ತಿರುಗಿ ಬೆಳೆದವಳು ಅವಳು. ಗಾಳಿಯಂತೆ ಸ್ವೇಚ್ಛೆಯಾಗಿ ಹೊರಟವಳು. ಭಿಕ್ಷೆ ಬೇಡಿಯೋ, ಕೂಲಿ ಬೇಡಿಯೋ, ಯಾರಾದರೂ ಜನರನ್ನು ಕಾಡಿಯೋ ಹೊಟ್ಟೆ ತುಂಬಿಕೊಳ್ಳುತ್ತಿದ್ದಳು. ಹಲವು ಸಲ ಊಟ ಬಿಟ್ಟರೆ ಬಿಟ್ಟುಬಿಡುತ್ತಿದ್ದಳು. ಅವಳ ಹೊಟ್ಟೆಗೆ ಇಂಥಹದೇ ಬೇಕೆಂಬ ನಿಯಮವೆ ಇರಲಿಲ್ಲ. ಬಸಪ್ಪನ ತಾನಾಗಿಯೇ ಏನಾದರೂ ಕೊಡುವನೆಂದು ತಿಳಿದಾಗ ಅವಳು ಮುದ್ದಾಂ ತನ್ನ ಊಟ ಬಿಟ್ಟು ಬರುತ್ತಿದ್ದಳು.

ಈ ಬೀದಿಯಲ್ಲಿಯ ಹುಡಿಗಿಯನ್ನು ಬಸಪ್ಪನು ಬೇಗನೆ ಮೆಚ್ಚಿದ. ದಿನಗಳುರುಳಿದಂತೆ ಅವಳ ಸಂಗಡ ಸಲಿಗೆ ಸಲ್ಲಾಪಗಳೂ ಬೆಳೆದವು. ಅದು ಎಂಥಹ ಪ್ರೀತಿಯೊ! ಬದುಕಿದ್ದ ತನ್ನ ಹೆಂಡತಿಯನ್ನು ತೊರೆದು ಇವಳ ಕೈ ಹಿಡಿಯಲು ಟೊಂಕ ಕಟ್ಟಿದ. ಮನೆಯಲ್ಲಿ ಒಂದು ದೊಡ್ಡ ನ್ಯಾಯವನ್ನೇ ಹೂಡಿದ. ಅಪ್ಪ, ಅವ್ವ, ಬಂಧುಬಳಗದವರು, ಊರ ಕೇರಿಯ ಜನರು ಎಲ್ಲರೂ ಬೇಡೆಂದರು. ಲಚ್ಮಿ ಹುಲುಮನುಜಳೆಂದು ಹೇಳಿದರು. ಎಲ್ಲರ

ಕಡೆಯಿಂದಲೂ ಅವನ ತಂದೆ 'ಛೀಥೂ' ಹಾಕಿಸಿದರು. ಆದರೆ........? ಯಾವ ಮಾತೂ ಬಸಪ್ಪನ ಅಂತರಾಳಕ್ಕೆ ಹೋಗಿ ಮುಟ್ಟಲಿಲ್ಲ. ಕುರುಡು ಪ್ರೀತಿಯ ಬೆಂಬತ್ತಿ ಅವನು ಸಾಗಿದ್ದನು. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ದೊರೆತರೆ ಎಷ್ಟು ಆನಂದವೋ ಅಷ್ಟೇ ಅವನಿಗೆ ಮನೆಯಿಂದ ಮುಕ್ತದ್ವಾರ ವನ್ನು ಪಡೆಯುವುದರಲ್ಲಿ ಇತ್ತು. ಲಚ್ಮಿಯು ಅವನನ್ನು ಅಷ್ಟು ಮಾಯೆಯ ಜಾಲದಲ್ಲಿ ಬೀಳಿಸಿದ್ದಳು.

ತಂದೆತಾಯಿಗಳಿಗೂ ಬಸಪ್ಪನು ಈ ರೀತಿ ವರ್ತಿಸುವನೆಂದು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ. ಒಬ್ಬನೇ ಒಬ್ಬ ಮಗ. ಅವನು ಹದಿನೈದು ವರ್ಷದವನಿರುವಾಗಲೆ ಅವನ ಮದುವೆಯನ್ನು ಬಹಳ ವಿಜೃಂಭಣೆಯಿಂದ ಆ ಹಳ್ಳಿಯಲ್ಲಿ ಮಾಡಿದ್ದರು. ಕೂಲಿ ಕುಂಬಳಿ ಮಾಡಿ ಹೊಟ್ಟೆ ತುಂಬಿಕೊಳ್ಳುವ ಆ ಬಡ ಪ್ರಾಣಿಗಳು ಮದುವೆಯ ಸಂಭ್ರಮದಲ್ಲಿ ತಮ್ಮ ಎಲ್ಲ ಬಡತನವನ್ನು ಮರೆತಿದ್ದರು. ಆಗಿನ ಬ್ಯಾಂಡು ಬಜಂತ್ರಿಗಳ ಆಕ್ರೋಶವನ್ನೂ, ಮದ್ದು-ಗುಂಡುಗಳ ರಂಭಾಟವನ್ನೂ ಹಳ್ಳಿಗರೆಲ್ಲ ಕೇಳಿ ಬಹಳ ಆಶ್ಚರ್ಯಭರಿತರಾಗಿದ್ದರು. ಆ ಲಗ್ನಕ್ಕೆ ಮಾಡಿದ ಸಾಲದ ಹೊರೆ ಇದೇ ಈಗ ಅವನ ಹೆಗಲಿನಿಂದ ಕೆಳಮೆಟ್ಟಲು ಇಳಿಯುತ್ತಿತ್ತು. ಅನೇಕ ಕೆಲಸಗಳಿಂದ ಹಣವನ್ನು ಗಳಿಸಿ ತೀರಿಸುತ್ತಿದ್ದ. ಅಷ್ಟರಲ್ಲಿಯೆ ಮನೆಯಲ್ಲಿ ಇಂಥ ವಿಚಿತ್ರ ಘಟನೆಯು ನಡೆಯ ಬೇಕೆ ?

ಈ ಜಗಳದ ಉರಿಗಳು ಬಸಪ್ಪನನ್ನು ಮನೆಯಿಂದ ಹೊರದೂಡಿದವು. ಮತ್ತೊಂದು ಮನೆಯನ್ನು ಬದಿಯ ಓಣಿಯಲ್ಲಿಯೆ ಹೂಡಿದನು. ಲಚ್ಮಿಗೆ ಬಸಪ್ಪನು ಆಧಾರಸ್ಥಂಭನಾದನು. ಇಬ್ಬರೂ ಕೂಡಿ ಆ ಚಿಕ್ಕಮನೆಯನ್ನು ಸಾರಿಸಿದರು. ಸ್ವೇಚ್ಛೆಯಿಂದ ಹರಿಯುವ ಲಚ್ಮಿಗೆ ಒಂದು ಮಾಟನ್ನ ಮನೆ ಸಿಕ್ಕಿದಾದ ಅತಿ ಸಂತೋಷವಾಯಿತು. ಅಂಥ ಅನುಭವವನ್ನು ಅವಳು ಎಂದೂ ಪಡೆದಿರಲಿಲ್ಲ. ತನ್ನ ಮನಸ್ಸಿನ ಲಹರಿಯಂತೆ ಮನೆಯನ್ನು ಸಿಂಗರಿಸುತ್ತಿದ್ದಳು. ಸುಣ್ಣದ ನೀರಿನಿಂದ ಗೋಡೆಯ ಮೇಲೆ ಹಲವು ಚಿತ್ರಗಳನ್ನು ತೆಗೆದಳು. ಒಂದೆಡೆಗೆ ಚಂದ್ರನ ಚಿತ್ರವನ್ನು ತೆಗೆಯುತ್ತಿದ್ದಳು. ಆಗ ಬಸಪ್ಪನು ಅದನ್ನು ನೋಡಿ ತಾನೂ ಒಂದು ತೆಗೆಯುವೆನೆಂದು ಹೇಳಿ, ಸೂರ್ಯನನ್ನು ಮೂಡಿಸಿದ. ಆಗಸದಲ್ಲಿ ನೇಸರನು ಉದಯವಾದಾಗ ಹೂಗಳೆಲ್ಲ ನಗುವಂತೆ, ಲಚ್ಮಿ ಬಿದ್ದು

ಬಿದ್ದು ನಕ್ಕಳು. ಆ ನಗೆಯಲ್ಲಿ ಚೇಷ್ಟೆಯೂ ಇತ್ತು. ಹೊಸ ಜೀವನದ ಉದಯದ ಪ್ರೀತಿಯೂ ನಲಿದಿತ್ತು.

ಕೂದಲನ್ನು ಕೆದರಿಕೊಂಡು ಕುಳಿತ ಲಚ್ಮಿ ಈ ಚಿತ್ರವನ್ನು ನೆನೆದು ಒಮ್ಮೆಲೆ ನಕ್ಕುಬಿಟ್ಟಳು........ಮರುಕ್ಷಣದಲ್ಲಿಯೆ ಆ ನಗೆ ಹೊಗೆಯಾಯಿತು! ಎದುರಿನ ಗೋಡೆಗೆ ಆ ಚಿತ್ರಗಳು ಕಾಣುತ್ತಿದ್ದವು. ವಿಚಿತ್ರ ವೇದನೆ ಅವಳ ಕರುಳನ್ನು ಹಿಂಡಿ ಹಿಂಡಿ ಒಗೆಯಿತು. ಚಿಕ್ಕವಳಿದ್ದಾಗ ಯಾವುದನ್ನೂ ಅವಳು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಅವಳ ಸ್ವಭಾವವೆ ಆಗ ಬೇರೆಯಾಗಿತ್ತು ಈಗ........? ಆ ದುಃಖವನ್ನು ಸಹಿಸುವದು ಆವಳಿಂದಾಗಲಿಲ್ಲ. ಆ ಚಿತ್ರವನ್ನು ಸಹ ಅವಳಿಂದ ನೋಡುವದು ಶಕ್ಯವಾಗಲಿಲ್ಲ. ಒಮ್ಮೆಲೆ ಎದ್ದು ಹೋದಳು ಸೂರ್ಯನ ಕಿರಣಗಳನ್ನು ತನ್ನ ಕೈಯಿಂದ ತಿಕ್ಕಿ ತಿಕ್ಕಿ ಒರಸಲು ಯತ್ನಿಸಿದಳು. ತೀರ ಹುಚ್ಚಿಯಂತೆ! ಅಹುದು, ತೀರ ಹುಚ್ಚಿ!

ಆಗಲೆ ಅರುಣನ ಕಿರಣಗಳೊಂದೆರಡು ಕಿಡಕಿಯ ಸಂದಿಯೊಳಗಿಂದ ಹಾಯ್ದು, ಲಚ್ಮಿಯ ಅಂಧಕಾರದ ಮನೆಯನ್ನು ಪ್ರವೇಶಿಸಿದ್ದವು. ಮೋಡಗಳಲ್ಲಿ ಆಡುವ ಬೆಳಕಿನ ಕಣಗಳಂತೆ ಶೋಭಿಸುತ್ತಿದ್ದವು.

ಹೀಗೆಯೆ ದಿನಗಳುರುಳಿದವು. ಚಿಂತೆಯ ಚಿತೆಯ ಮೇಲೆ ಲಚ್ಮಿ ಬೆಂದು ಬೆಂಡಾದಳು. ದಿನಗಳ ಪರದೆಗಳಲ್ಲಿ ದುಃಖವು ಈಗಾಗಲೆ ಮರೆಯಾಗಿ ಹೋಗಬಹುದಾಗಿತ್ತು. ಸತ್ತು ಹೋದಮೇಲೆ ಬಸಪ್ಪನನ್ನು ಅಷ್ಟೇಕೆ ಚಿಂತಿಸಬೇಕು? ಬರುವ ಫಲವಾದರೂ ಏನು? ಮತ್ತೊಬ್ಬನನ್ನು ಉಡುಕಿ ಮಾಡಿಕೊಂಡು ಸುಖವಾಗಿ ಬಾಳಬೇಕು

ಇದೇ ವಿಚಾರವೆ ಯಜಮಾನನದಾಗಿತ್ತು. ಯಜಮಾನನು ಊರಿಗೇ ಹಿರಿಯನು ಎಲ್ಲರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದನು. ಎಲ್ಲರಿಗೂ ಉಪದೇಶಿಸುತ್ತಿದ್ದನು. ತನಗೆ ತಿಳಿದಂತೆ ದೇಶದಲ್ಲಿಯ ಸುದ್ದಿಗಳನ್ನು ಹೇಳುತ್ತಿದ್ದನು. ಅವನು ಹೇಳುವ ಸುದ್ದಿಗಳನ್ನು ಹಳ್ಳಿಗರು ಹೆಚ್ಚಾಗಿ ಕೇಳುತ್ತಿದ್ದರು. ಊರಿಗೆ ಅವನೇ ವರ್ತಮಾನ ಪತ್ರವಾಗಿದ್ದ. ಎಲ್ಲರ ಯೋಗಕ್ಷೇಮವನ್ನು ಒಳ್ಳೇ ರೀತಿಯಿಂದ ನೋಡಿಕೊಳ್ಳುತ್ತಿದ್ದುದರಿಂದ ಅವನಿಗೆ 'ಯಜಮಾನ'ನೆಂಬ ಹೆಸರು ಬಿದ್ದಿತ್ತು. ಯಾರಿಗೆ ಗಂಡ ಸಾಯಲಿ, ಯಾರಿಗೆ ಮದುವೆ

ಯಾಗಲಿ, ಯಾರಿಗೆ ಕೋರ್ಟು ಕಚೇರಿಗಳಿಗೆ ಹೋಗುವದಾಗಲಿ, ಎಲ್ಲದರಲ್ಲಿಯೂ ಅವನ ಸಹಾಯದ ಕೈ ಇರುತ್ತಿತ್ತು. ಅವನನ್ನು ಕೇಳದೆ ಯಾರೂ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಅವನಿಗೆ ಊರಲ್ಲಿ ಅಷ್ಟು ಮರ್ಯಾದೆ ಇತ್ತು. ಲಚ್ಮಿಗೆ ಉಂಟಾದ ದುಃಖದಲ್ಲಿ ತಾನೂ ಸಮಭಾಗಿಯಾಗಿ ಅವಳಿಗೆ ಅನೇಕ ರೀತಿಯಿಂದ ಸಹಾಯ ನೀಡಿದ.

ಆದರೆ ಇದು ಹಳ್ಳಿಯಲ್ಲಿ ಬೇರೊಂದು ಗಾಳಿಯನ್ನೇ ಬೀಸಿತು. ಲಚ್ಮಿಗೆ ಸಿಗುವ ರೂಪಾಯಿಗಳನ್ನು ಅಪಹರಿಸಲು ಯತ್ನಿಸುತ್ತಾನೆಂದು ಕೆಲವರಂದರು. ಹಲವರು ಅವಳನ್ನು ಮದುವೆ ಮಾಡಿಕೊಳ್ಳಲು ಹವಣಿಸುತ್ತಾನೆಂದು ನುಡಿದರು. ಇಂಥ ನುಡಿಗಳಿಗೆ ಯಜಮಾನ ಮಾತ್ರ ಲಕ್ಷಗೊಡಲಿಲ್ಲ. ದಿನಾಲು ಸಂಜೆ ತನ್ನ ಕೆಲಸಗಳು ತೀರಿದ ಮೇಲೆ ಅವಳನ್ನು ಮಾತಾಡಿಸಿಕೊಂಡು ಬರುತ್ತಿದ್ದ.

ಒಂದು ಸಂಜೆ ನಿತ್ಯದಂತೆ ಅಲ್ಲಿಗೆ ಬಂದ. ಅವನಿಗೆ ಒಮ್ಮೆಲೆ ಕಚೇರಿಯಲ್ಲಿ ಆ ದಿನ ನಡೆದ ಸಂಗತಿ ನೆನಪಾಯಿತು. ಮೊದಲು ಕಚೇರಿಯಲ್ಲಿಯ ಜನರ ವರ್ಣನೆಯಾಯಿತು. ಆಮೇಲೆ ಸಾವಧಾನವಾಗಿ ಬಸಪ್ಪನ ಸಾಮಾನುಗಳ ಮಾತನ್ನು ತೆಗೆದ. ಲಚ್ಮಿ ಸಾಮಾನುಗಳನ್ನು ದೇವರಂತೆ ಪೂಜಿಸುತ್ತಿದ್ದಳು. ಅವನ್ನು ತೆರೆದು ಯಜಮಾನನಿಗೆ ತೋರಿಸಿದಳು. ಯಜಮಾನನ ದೃಷ್ಟಿ ಹಲವು ಪತ್ರಗಳ ಕಡೆಗೆ ಹೊರಳಿತು ಅಲ್ಲಿರುವ ಅಗಾಧವಾದ ಸುದ್ದಿಗಳನ್ನು ಲಚ್ಮಿಗೆ ಹೇಳಲು ತೊಡಗಿದ. ಅವನು ಸಿಂಗಾಪೂರಕ್ಕೆ ಹೋದುದನ್ನೂ ಅಲ್ಲಿಂದ ತನ್ನ ಕ್ಷೇಮಸಮಾಚಾರ ತಿಳಿಸಿದುದನ್ನೂ ಹೇಳಿದನು. ಲಚ್ಮಿ ಸಿಂಗಾಪೂರವೆಂದರೆ ತಮ್ಮ ಊರ ಹತ್ತಿರ ೬-೭ ಮೈಲುಗಳ ಮೇಲಿರುವ ಹಳ್ಳಿಯೆ ಎಂದು ಆಶ್ಚರ್ಯಚಕಿತಳಾಗಿ ಕೇಳಿದಳು. ಆಗ ಯಜಮಾನ ಅದು ಏಳು ಸಮುದ್ರ ದಾಟಿ ಇರುವದೆಂದೂ ತನ್ನ ಅಮೋಘವಾಣಿಯಲ್ಲಿ ಬಣ್ಣಿಸಿ ಹೇಳಿದ. ಹಿರಿಯರು ಹೇಳುವ ದೆವ್ವನ ಕತೆಗಳನ್ನು ನಂಬುವಂತೆ ಅವಳು ಯಜಮಾನನ ಮಾತುಗಳನ್ನು ನಂಬಿದಳು.

ಇದೇ ಸಂದರ್ಭದಲ್ಲಿ ಯಜಮಾನನು ಅವಳ ಉಡುಕಿಯ ಮಾತನ್ನು ತೆಗೆದನು. ಹೇಗಾದರೂ ಬಸಪ್ಪ ಸ್ವರ್ಗವಾಸಿಯಾಗಿದ್ದಾನೆ. ಅವನ ವಿಚಾರವಂತೂ ಇಲ್ಲವೇ ಇಲ್ಲ. ಲಚ್ಮಿಯ ವಯಸ್ಸು ಇನ್ನೂ ಚಿಕ್ಕದು. ಹಾಗೆಯೆ

ಜೀವಮಾನ ಕಳೆದರೆ ಏನು ಉಪಯೋಗ? ಮತ್ತೊಬ್ಬನನ್ನು ಲಗ್ನವಾಗಿ ಬಿಟ್ಟರೆ ಕೊನೆವರೆಗೂ ಸೌಖ್ಯವುಂಟಾಗುವದು. ಈ ಹೊತ್ತಿನಲ್ಲಿ ಲಚ್ಮಿಗೆ ಯಜಮಾನನದೆ ನೆನಪಾಯಿತು. ಅವನು ಇನ್ನೂ ತನ್ನ ಹರಯದ ವಯಸ್ಸನ್ನು ಮೀರಿರಲಿಲ್ಲ ಈ ಮಾತನ್ನು ಅವಳು ಬಾಯಿಂದ ಹೇಳಲಿಲ್ಲ. ಅದರೆ ಅವಳ ಕಣ್ಣಿನ ಹೊಳಪು ಆ ಮಾತನ್ನು ಹೊರಹೊಮ್ಮಿಸಿದವು. ಅದನ್ನು ನೋಡಿದ ಕೂಡಲೆ ಯಜಮಾನನಿಗೆ ತಾನು ಅವಳ ಹೆಬ್ಬಟ್ಟಿನ ಗುರ್ತು ಮಾಡಿಸಿದುದರ ಅನುಭವ ಹಠಾತ್ತಾಗಿ ನೆನಪಾಯಿತು ಅವನು ಅಂತಹ ಎಷ್ಟೋ ಗುರ್ತುಗಳನ್ನು ಮಾಡಿಸಿದ್ದ. ಆದರೆ ಆವನ ಕೈಯು ಮಾತ್ರ ನಡುಗಿರಲಿಲ್ಲ. ಆದಿನ ಅದು ಹಾಗೆ ಏಕಾಗಬೇಕು? ತನ್ನ ಆಶೆಯನ್ನು ಪೂರೈಸುವದಾದರೆ, ಲಚ್ಮಿ ಅಲ್ಲಿಯೆ ಎದುರಿಗಿದ್ದಳು. ಏಕಾಕಿಯಾಗಿಯೆ ಇದ್ದಳು. ಹೊರಗೆ ಕತ್ತಲೆಯು ಮುಸುಕಿತ್ತು. ಒಳಗೆ ಅವಳ ಕಣ್ಣುಗಳ ಬೆಳಕಿತ್ತು. ಅವು ಅವನನ್ನು ಕರೆಯುವಂತೆ ಭಾಸವಾದವು. ಆದರೆ ಮನಸ್ಸನ್ನು ಬಿಗಿಹಿಡಿದು ಚಿಂತೆಯೊಳಗಾಗಿ ಅಲ್ಲಿಂದ ಎದ್ದು ಹೋದ.

ಆ ರಾತ್ರಿ ಲಚ್ಮಿಗೆ ಯಜಮಾನನ ಮುಖ ನೆನಪಾಯಿತು. ಅವನ ಅಂತರಾಳದ ಸುಳಿಯು ಅವಳಿಗೆ ಕಂಡಂತಾಗಿತ್ತು. ಅವನು ಅಷ್ಟು ರಾತ್ರಿಯವರೆಗೆ ಏಕೆ ಹರಟೆ ಕೊಚ್ಚಬೇಕು? ಈ ವಿಚಾರ ಅವಳ ನಿದ್ದೆಯನ್ನು ಕೆಡಿಸಿದುವು. ಮೇಲಾಗಿ ಅವಳಿಗೆ ಇತ್ತಿತ್ತಲಾಗಿ ರಾತ್ರಿವೇಳೆ ನಿದ್ದೆಯೆ ಬರುತ್ತಿರಲಿಲ್ಲ. ಇವಳು ಒಬ್ಬಳೆ ಇರುವದನ್ನು ಕಂಡು ಒಂದು ಸಲ ಹಲವು ಕುಡುಕರು ಒಳಗೆ ಬರಲು ಯತ್ನಿಸಿದರು. ಇವಳನ್ನು ಹುಚ್ಚಾಪಟ್ಟೆಯಾಗಿ ಬಯ್ದಿದ್ದರು. ಊರ ಜನರ ಹರಯದ ಕಣ್ಣುಗಳೆಲ್ಲ ಇವಳೆಡೆಗೆ ಓಡಿಬಂದಿದ್ದವು. ಈ ಜಾಲದಿಂದ ಅವಳು ಪಾರಾಗಬೇಕಾದರೆ ರಾತ್ರಿಯೆಲ್ಲ ನಿದ್ದೆಯನ್ನು ಮಾಡುತ್ತಿರಲಿಲ್ಲ. ಬಹಳ ಭೀತಿಯುಂಟಾದರೆ ನೆರೆಯಲ್ಲಿಯೆ ಇದ್ದ. ಅಂತಃಕರಣವುಳ್ಳ ಒಬ್ಬ ಮುದುಕಿಯನ್ನು ಕರೆದು ಕೂಡಿಸಿಕೊಳ್ಳುತ್ತಿದ್ದಳು.

ಲಚ್ಮಿಗೆ ಇಂಥ ಪ್ರಸಂಗ ಬರದೇ ಇದ್ದರೆ ಎಷ್ಟು ಗುಣವಾಗುತ್ತಿತ್ತು! ಮನುವೆಯಾದಂದಿನಿಂದ ಅವಳ ಹೃದಯ ಪರಿವರ್ತನೆಯಾಗಿದ್ದಿತು. ಒಬ್ಬ ಶೀಲವಂತೆಯಾದ ಸ್ತ್ರೀಯಂತೆ ಬಾಳಿದ್ದಳು. ಇನ್ನೂ ಬಾಳಬೇಕೆಂದಿದ್ದಳು. ಹಾಗೆ ಇರಬೇಕಾಗಿದ್ದರೆ ಅಂದು ಬಸಪ್ಪನನ್ನು ಯುದ್ಧಕ್ಕೆ ಬಿಡದೇ ಇದ್ದರೆ

ಎಷ್ಟು ಒಳಿತಾಗುತ್ತಿತ್ತು ! ತಾನೇ ಅವನ ಪಾದಗಳನ್ನು. ಮೈಯನ್ನು ಗಟ್ಟಿಯಾಗಿ ಹಿಡಿದು........ಅವನನ್ನು ಹೋಗಗೊಡದೆ ಇದ್ದರೆ........ಅವನೇನು ಮಾಡುತ್ತಿದ್ದ ?..........ಆದರೆ ಬಸಪ್ಪನು ಯುದ್ಧಕ್ಕೆ ಹೋಗುವಾಗ ಬಹಳ ಆಶ್ವಾಸನಗಳನ್ನು ಕೊಟ್ಟಿದ್ದ. ತಾನು ಯುದ್ಧ ನಿಂತಮೇಲೆ ತಿರುಗಿ ಬರುವುದಾಗಿಯೂ, ಹಾಗೆ ದೇವರು ಅವನಿಗೆ ಕನಸಿನಲ್ಲಿ ಹೇಳಿರುವದಾಗಿಯೂ ಅವಳಿಗೆ ಮೇಲಿಂದಮೇಲೆ ಹೇಳಿದ್ದ. ಹೀಗಿದ್ದರೂ ಸಹ ಅವಳು ಬೇಡವೆಂದು ಹೇಳಿದ್ದರೆ............?

ಬಸಪ್ಪನಿಗೆ ಹಾಗೆ ಅನಿಸಲಿಲ್ಲ. ಲಚ್ಮಿಯ ಮಾವನ ವರ್ಗವನ್ನು ಮುರಿಯಬೇಕಾಗಿತ್ತು ಅವನಿಗೆ. ಬಸಪ್ಪ ಮತ್ತು ಲಚ್ಮಿ ಎಷ್ಟು ಕೂಲಿ ಮಾಡಿದರೂ ದುರ್ದಿನಗಳಲ್ಲಿ ಅವರ ಹೊಟ್ಟೆಗೆ ಸಾಕಾಗುತ್ತಿರಲಿಲ್ಲ. ಮೇಲಾಗಿ ಬಸಪ್ಪನ ತಂದೆ ತನ್ನ ಹುರಿಮೀಸೆಯ ಮೇಲೆ ಕೈಯಾಡಿಸುತ್ತ ತನ್ನ ಶ್ರೇಷ್ಠತೆಯನ್ನು ಊರ ತುಂಬ ಮೆರೆಯಿಸುತ್ತಿದ್ದ. ಅವನಿಗಿಂತಲೂ ತಾನು ಮುಂದಾಗಬೇಕೆಂಬ ಬಸಪ್ಪನ ಹವ್ಯಾಸ ಎಷ್ಟೋಸಲ ಅವನಿಗಿಂತಲೂ ಉದ್ದ ಮೀಸೆಯನ್ನು ಬಿಡಲು ಯತ್ನಿಸಿದ್ದ.

ಒಂದುಸಲ ಹೀಗಾಯಿತು. ರಿಕ್ರೂಟಿಂಗ ಆಫೀಸರರೊಬ್ಬರು ತಮ್ಮ ಮೋಟಾರಿನ 'ಹಾರ್ನ'ನ್ನು ಭಯಂಕರವಾಗಿ ಸಪ್ಪಳ ಮಾಡುತ್ತ ಆ ಹಳ್ಳಿಯನ್ನು ಹೊಕ್ಕರು. ಶಾನಭೋಗರು, ಗೌಡರು, ಊರಜನರು ಎಲ್ಲರೂ ನೆರೆದು ಜೀ ಜೀ ಅನ್ನುತ್ತ ಬಾಗಿ ನಮಸ್ಕರಿಸಿದರು. ಆದರೆ ಎಲ್ಲರೂ ಯುದ್ಧಕ್ಕೆ ಹೊರಡಲು ಸನ್ನದ್ಧರಾಗಬೇಕೆಂದು ಚಾವಡಿಯ ಮುಂದೆ ನೆರೆದಿದ್ದ ಚಿಕ್ಕ ಸಭೆಯಲ್ಲಿ ಘೋಷಣೆ ಮಾಡಿದ ಕೂಡಲೆ ಯಾರೂ ಮಾತನಾಡಲೇ ಇಲ್ಲ. ಎಲ್ಲರೂ ಸಾಗರದ ಸ್ತಬ್ಧತೆಯಲ್ಲಿ ಮಾಯವಾದರು. ಬಸಪ್ಪನೊಬ್ಬನೆ ತನ್ನ ಭುಜಗಳನ್ನು ಹಾರಿಸುತ್ತ ಕಲಿಭೀಮನಂತೆ ಸಭೆಯಲ್ಲಿ ಎದ್ದುನಿಂತ. ಆಫೀಸರರು ಅವರಿಗೆ ಬೇಕಾದಷ್ಟು ಧನದ ಸಹಾಯ ನೀಡುವದಾಗಿಯೂ ಆಶ್ವಾಸನವಿತ್ತರು. ಅಂತೆಯೆ ಅವನು ಯುದ್ಧರಂಗದಲ್ಲಿ ಮುಂದಡಿಯಿಟ್ಟ. ಲಚ್ಮಿಗೆ ಬೇಕಾದಷ್ಟು ಹಣ ಕಳಿಸುವದಾಗಿ ಹುರುಪಿನಿಂದ ಹೇಳಿಹೋದ.

ಹಲವು ತಿಂಗಳಾದಮೇಲೆ, ಯುದ್ಧದ ಮುಂಭಾಗಕ್ಕೆ ಹೋಗುವದಕ್ಕಿಂತ ಮೊದಲು, ಒಂದು ತಿಂಗಳ ರಜೆ ಪಡೆದುಕೊಂಡು ಬಂದ. ಆಗ ಊರತುಂಬ

ಮೆರೆದಾಡಿದ. ತಂದೆಯ ಗರ್ವವನ್ನು ಕುಗ್ಗಿಸಿದ. ತರತರದ ವೇಷಗಳನ್ನು ಧರಿಸಿದ. ಎಂದೂ ಮಿಲಿಟರಿ ಜನರನ್ನು ನೋಡದ ಆ ಹಳ್ಳಿಗರು, ಇವನ ಟಾಪ ಟೀಪನ್ನು ಕಂಡು, ಒಬ್ಬ ದೊಡ್ಡ ಅಧಿಕಾರಸ್ಥನೆ ತಮ್ಮ ಊರಿಗೆ ಬಂದಿರುವ ನೇನೊ ಎಂದು ತಿಳಿದಿದ್ದರು. ಅವನನ್ನು ನೋಡಿದ ಕೂಡಲೆ ಸಲಾಂ ಮಾಡುತ್ತಿದ್ದರು. ಚಿಕ್ಕ ಬಾಲಕರಂತೂ 'ಸೆಲ್ಯೂಟ್' ಮಾಡುವದನ್ನು ಮರೆಯುತ್ತಿರಲಿಲ್ಲ. ಏಕೆಂದರೆ ಅವರಿಗೆ ಬಿಸ್ಕೀಟುಗಳು ಸಿಗುತ್ತಿದ್ದವು. ಬಸಪ್ಪನು ಹೊತ್ತಿಸುವ ಬಿಳಿ ಬತ್ತಿಗಳನ್ನು ಬಹಳ ಕುತೂಹಲದಿಂದ ನೋಡುತ್ತಿದ್ದರು. ಅವನು ಅದರ ಹೊಗೆಯನ್ನು ಹುಡುಗರ ಮುಖದ ಮೇಲೆ ಬಿಡುತ್ತಿದ್ದ ಅವು ಬೆದರುತ್ತಿದ್ದವು. 'ಬೆದರಲಿಕ್ಕೆ ಇದೇನು ಯುದ್ಧವೆ?' ಎನ್ನುತ್ತಿದ್ದ ಬಸಪ್ಪ. ಅವನ ಟಿಸ್ ಪಿಸ್ ಇಂಗ್ಲೀಷನ್ನು ನೋಡಿಯಂತೂ ಊರ ಪ್ರಮುಖರೆಲ್ಲ ಗಾಬರಿಗೊಂಡಿದ್ದರು. ಬಸಪ್ಪನೆ ತಮ್ಮೂರಿನ ಕೀರ್ತಿಯ ದೀಪವೆನ್ನುತ್ತಿದ್ದರು. ಊರಿನ ಇವೆಲ್ಲ ಸಂಗತಿಗಳು ಬಸಪ್ಪನ ಮನಸ್ಸನ್ನು ತಿನ್ನುತ್ತಿದ್ದವು.

ಆದರೆ ಬಸಪ್ಪನು ಈಗ ಎಲ್ಲಿ? ಆ ಕಗ್ಗತ್ತಲೆಯಲ್ಲಿ ಇಂಥ ವಿಚಾರ ಅವಳ ಹೃದಯವನ್ನು ಕೆಣಕಿತು. ಅವನು ಸತ್ತು ಎಷ್ಟೋ ದಿನಗಳಾಗಿವೆ. ಸರಕಾರದವರೆ ಮೂರುತಿಂಗಳಾದ ಮೇಲೆ ಆ ಸುದ್ದಿಯನ್ನು ತಿಳಿಸಿದರು ಆ ಸುದ್ದಿಯೂ ವಿಚಿತ್ರವಾಗಿಯೇ ಬಂದಿತು. ಆ ನಂಬರಿನ ಸಿಪಾಯಿಯು ಸತ್ತಿರುವನೆಂದೂ, ಆವನ ಹಲವು ಸಾಮಾನುಗಳು ಮಾತ್ರ ದೊರೆತಿರುವವೆಂದೂ, ಅವನು ಬಹುತರವಾಗಿ ಸತ್ತಿರಬಹುದೆಂದೂ ತಿಳಿಸಲಾಗಿತ್ತು........ ಮುಂದೆ?

ಯಾರೋ ಬಾಗಿಲ ತಟ್ಟಿದಂತಾಯಿತು, ಪಿಸಿ ಪಿಸಿ ನಕ್ಕಂತಾಯಿತು. ಒಳಗೆ ಕಡಬಡ ಸಪ್ಪಳವಾಯಿತು. ಒಂದೆರಡು ಇಲಿಗಳು ಜಿಗಿದು ಹೊರಗೆ ಬಂದವು. ಲಚ್ಮಿ ಗದಗದ ನಡುಗಿದಳು. ಏಳುವ ಧೈರ್ಯ ಅವಳಿಗಾಗಲಿಲ್ಲ. ದೀಪವನ್ನು ಆರಿಸಿದವಳೆ ಮುಸುಕು ಹಾಕಿಕೊಂಡು ಮಲಗಿಬಿಟ್ಟಳು. ಭೋ ಎಂದು ಗಾಳಿ ಅಳುವ ಸಪ್ಪಳ ಕೇಳಬರುತ್ತಿತ್ತು.

× × × ×

ಮಿಣಿ ಮಿಣಿ ದೀಪ; ಮಂದ ಬೆಳಕು; ನಡುರಾತ್ರಿ ಕಳೆದುಹೋಗಿದೆ. ಲಚ್ಮಿ ಸ್ತಬ್ಧವಾಗಿ ಮಲಗಿದ್ದಾಳೆ.

ಅವಳಿಗೆ ನಿದ್ದೆಯಲ್ಲಿ ಕನಸು; ಬಸಪ್ಪನು ರೈಲಿನಲ್ಲಿ ಕುಳಿತಿದ್ದಾನೆ. ಅವನ ಕೊರಳೊಳಗೆಲ್ಲ ಹೂಮಾಲೆಗಳಿವೆ. ಬಂದವನೆ ಮನೆಯ ಬಾಗಿಲ ಬಡಿದ.

ಲಚ್ಮಿ ಎಚ್ಚತ್ತಳು. ಸುತ್ತಲೂ ನೋಡಿದಳು. ಯಾರೂ ಇರಲಿಲ್ಲ. ಅವಳ ಎದೆ ಡವಡವಸುತ್ತಿತ್ತು. ಎಡಗಣ್ಣು ಒಂದೇಸವನೆ ಹಾರುತ್ತಿತ್ತು. ಹಾಗೆಯೇ ಮತ್ತೆ ನಿದ್ದೆಹೋದಳು.

ನಿದ್ದೆಯಲ್ಲಿ ಮತ್ತೆ ಬಸಪ್ಪ! ಕೇಕೆ ಹಾಕುತ್ತಿದ್ದಾನೆ! ತನ್ನ ಟೊಪ್ಪಿಗೆಯನ್ನು ತೂರುತ್ತಿದ್ದಾನೆ! ಅವಳ ಹತ್ತಿರ ಬಂದು ಮಾತನಾಡಿಸುತ್ತಿದ್ದಾನೆ! ಲಚ್ಮಿ ಎದ್ದು ನೋಡಿದಳು!

ಹೊರಗೆ ಯಾರೊ ಬಾಗಿಲ ತಟ್ಟಿದಂತಾಯಿತು. "ಯಾರಿರಬಹುದು?" ತನ್ನನ್ನು ಮೋಸಮಾಡಲು ಯಾರಾದರೂ ಬಂದಿರುವರೊ ಏನೊ ಎಂದು ಒಮ್ಮೆ ಗಾಬರಿಯಾದಳು. ಮರುಕ್ಷಣದಲ್ಲಿಯೆ ಅವಳಿಗೆ ಕೋಳಿ ಕೂಗಿಕೊಂಡ ಧ್ವನಿ ಕೇಳಿಸಿತು. ಧೈರ್ಯಮಾಡಿ ಬಾಗಿಲ ತೆರೆದಳು. ನೋಡುತ್ತಾಳೆ! ತನ್ನ ಕಣ್ಣುಗಳನ್ನು ನಂಬಲಿಲ್ಲ. ಅವನು ನಿಜವಾಗಿಯೂ ತನ್ನವನೆ ಆಗಿದ್ದನು!

"ನಾ ಸತ್ತೇನಿ ಅಂತ ತಿಳಿದಿದ್ದೇನು?....ಇಲ್ಲ, ಈಗ ನಾನು ಸುಭಾಸ ಸೈನಿಕ" ಎಂದ.

ಲಚ್ಮಿ ಕಣ್ತುಂಬ ನೋಡಿದಳು. ಮುಂಜಾವಿನ ತಂಪಾದ ಗಾಳಿ ಅವಳ ಮೈ ತಟ್ಟಿತು. ಅವಳ ಮೈ ಚೇತರಿಸಿತು.

ಅದೇ ಆಗ ಸೂರ್ಯನ ಉದಯಕ್ಕಾಗಿ ಉಷೆಯು ಕಾದು ನಿಂತಿದ್ದಳು. ಪೂರ್ಣಚಂದ್ರ ಪಶ್ಚಿಮದಲ್ಲಿ ಇನ್ನೂ ಬೆಳಗುತ್ತಿದ್ದ.

ಕನಸೆಲ್ಲ ನನಸಾಗಿತ್ತು! ದೈವದ ಲೀಲೆ! ಅವಳ ಜೀವನದ ಉದಯವಾಗಿತ್ತು!

# ಇಬ್ಬರು ಬಿಕ್ಷುಕರು



ತುಂಗಭದ್ರೆಯು ಬಂಡೆಗಲ್ಲುಗಳಲ್ಲಿ ಜಿಗಿಯುತ್ತ ಹರಿದಿದ್ದಾಳೆ. ತೆರೆಗಳು ಬಂದು ದಡೆಗೆ ಅಪ್ಪಳಿಸುವ ಸಪ್ಪಳ ಬೆಳಗು ಬೈಗೂ ಕೇಳುತ್ತಿರುತ್ತದೆ. ಈ ಬಂಡೆಗಲ್ಲುಗಳಲ್ಲಿ ಯಾವ ಘಾಟಗಳೂ ಇಲ್ಲ. ಅನೇಕ ಕಾಲ್ದಾರಿಗಳು ಇವೆ. ಈ ದಂಡೆಯಿಂದ ಹಾಗೆಯೆ ಮೇಲಕ್ಕೆ ಸ್ವಲ್ಪ ದಾರಿ ನಡೆದುಹೋಗಬೇಕು. ಅಲ್ಲಿ ಎತ್ತರದ ಮೇಲೆ ಒಂದು ಸಣ್ಣ ಪರ್ವತದಲ್ಲಿ ದುರ್ಗಾದೇವತೆಯ ದೇವಾಲಯವಿದೆ. ಅದರ ಶಿಖರ ನದಿಯಲ್ಲಿ ಸ್ನಾನವಾಡುವ ಜನರಿಗೆಲ್ಲ ಕಾಣುತ್ತದೆ. ಈ ದೇವಾಲಯದ ಸನಿಹದಲ್ಲಿ ಸುತ್ತುಮುತ್ತು ಯಾರ ಮನೆಗಳೂ ಇಲ್ಲ. ಆದರೆ ದೇಗುಲದ ಹಿಂದಿನ ಬದಿಯಲ್ಲಿ ಸ್ವಲ್ಪ ದೂರ ಹೋದರೆ ಹಲವು ಹೆಂಟೆಯ ಮನೆಗಳು ಕಾಣುತ್ತವೆ. ಇಲ್ಲಿಯ ಸುತ್ತುಮುತ್ತಲಿನ ವಾತಾವರಣ ಯಾವಾಗಲೂ ಶಾಂತವಾದುದು. ಕಬ್ಬಿನ ತೋಟಗಳಲ್ಲಿ ಕೆಲಸವಾಡುವ ಹಲವು ಒಕ್ಕಲಿಗರ ಧ್ವನಿ, ನದಿಯ ಇಂಪಾದ ಸಪ್ಪಳ ಮತ್ತು ಅಲ್ಲಲ್ಲಿ ಉತ್ಸಾಹದಿಂದ ಕೂಗುವ ಪಕ್ಷಿಗಳ ಕೂಜನ ಇವುಗಳನ್ನು ಬಿಟ್ಟು ಮತ್ತೆ ಯಾವ ಗದ್ದಲವೂ ಅಲ್ಲಿ ಇರುವದಿಲ್ಲ.

ಆದರೆ ವರ್ಷಕ್ಕೊಮ್ಮೆ ಅಲ್ಲಿಯ ಶಾಂತವಾತಾವರಣವು ಬದಲಾಗಿ ಎಲ್ಲೆಲ್ಲಿಯೂ ಗದ್ದಲವು ಕೇಳಬರುತ್ತದೆ. ಸಂಜೆಯ ಸುಂದರವಾದ ಹೊಂಬಣ್ಣದಲ್ಲಿ ಧೂಳಿ ಮುಸುಕಿದಂತಾಗುತ್ತದೆ. ಬೇಸಗೆಯ ದಿನಗಳಲ್ಲಿ ದುರ್ಗಾದೇವತೆಯ ಜಾತ್ರೆಯಾಗುವುದು. ಆಗ ಅನೇಕ ಜನರು ಇರಿಬೆಗಳಂತೆ ಮುಕುರುವರು. ವ್ಯಾಪಾರಸ್ಥರು ಡೇರೆಗಳನ್ನು ಹೊಡೆಯುತ್ತಾರೆ. ನಾಟಕ ಕಂಪನಿಗಳು, ಸರ್ಕಸ್ಸುಗಳು ಬೀಡಾರ ಬಿಡುತ್ತವೆ. ಮೂಲೆ ಮೂಲೆಗಳಿಂದ ಲೆಕ್ಕವಿಲ್ಲದಷ್ಟು ಭಕ್ತರು ಆಗಮಿಸುತ್ತಾರೆ. ಒಂದೇ ದಿವಸ ಉತ್ಸವವಿದ್ದರೂ ಒಂದು ಪಕ್ಷ ಮುಗಿಯುವವರೆಗೂ ಜನರು ಅಲ್ಲಿಂದ ಕದಲುವದಿಲ್ಲ.

ಒಂದು ವರ್ಷ ನಾನೊಮ್ಮೆ ಈ ಜಾತ್ರೆಗೆ ಹೋಗಿದ್ದೆ. ತೇರನ್ನೆಳೆಯುವ ಮುನ್ನಾದಿನವೆ ನಾನಲ್ಲಿದ್ದೆ. ಬೆಳಗಿನಲ್ಲಿ ನಾನು ನದಿಯ ಸ್ನಾನಕ್ಕೆಂದು ಹೊರಟಾಗ, ದಾರಿಯಲ್ಲಿ ಅನೇಕ ಬಿಕ್ಷುಕರನ್ನು ನೋಡಿದೆ. ಜಾತ್ರೆಗೂ ಬಿಕ್ಷುಕರಿಗೂ ನಿಕಟ ಸಂಬಂಧ. ಜಗತ್ತಿನಲ್ಲಿ ವಸಂತಋತುವಿದ್ದಲ್ಲಿ ಕೋಗಿಲೆಗಳು ಹಾರಿ ಹೋಗುವವಂತೆ! ಬಿಕ್ಷುಕರೂ ಪರಪುಷ್ಟರು. ಅಲ್ಲಿರುವ ಅನೇಕ ಕಪ್ಪುಬಣ್ಣದ ಕೋಗಿಲೆಗಳಲ್ಲಿ ನನ್ನ ಲಕ್ಷ್ಯವೇಕೊ ವಿಶೇಷವಾಗಿ ಇಬ್ಬರು ಬಿಕ್ಷುಕರ ಕಡೆ ಹೋಯಿತು. ಅವರನ್ನು ಕಂಡ ಮೊದಲನೆಯ ನೋಟ ಇನ್ನೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದಂತೆ ಉಳಿದಿದೆ.

ಆ ಇಬ್ಬರು ಬಿಕ್ಷುಕರು ಬೀದಿಯ ಬದಿಯಲ್ಲಿದ್ದರು. ಅವರಲ್ಲಿ ಒಬ್ಬನು ಎದ್ದುನಿಂತಿದ್ದನು. ಅವನ ದೇಹ ಕೊಬ್ಬಿದ್ದಿತ್ತು. ಪುಷ್ಟವಾದ ದುಂಡ ಅವಯವಗಳು. ಬಿಕ್ಷುಕನಾಗಿದ್ದರೂ ಆ ಸುಖದ ಮೈಯ ಬೊಜ್ಜನ್ನು ಹೇಗೆ ಬೆಳೆಯಿಸಿದ್ದನೊ! ತನ್ನ ಮುಡಿಯನ್ನು ನಾಟಕ ಕಂಪನಿಯ ನಾರದನಂತೆ ಸಿಂಗಾರ ಮಾಡಿಕೊಂಡಿದ್ದನು. ಸಾಲಿಗ್ರಾಮದ ದೇಹದ ತುಂಬ ವಿಭೂತಿಯ ಉದ್ಧೂಲನದ ಅಲಂಕಾರವಾಗಿತ್ತು. ಗಿಡ್ಡಮೂರುತಿಗೆ ಆ ನಾರದನ ವೇಷ ವಿಚಿತ್ರವಾಗಿ ಕಾಣುತ್ತಿತ್ತು. ಅದರಲ್ಲಿಯೂ ಅವನು ಹಾಡುಹಾಡಿ ಒದರಿಕೊಳ್ಳುವ ಧ್ವನಿಯು, ಜನರು ಎದುರಿಗೆ ಬಂದಕೂಡಲೆ ಅವನು ನಗುವ ದೇಶಾವರಿ ಮುಗುಳು ನಗೆಯು ನನ್ನ ನೋಟವನ್ನು ಆಕರ್ಷಿಸಿದವು.

ಇನ್ನೊಬ್ಬನು ಕೆಳಗೆ ನೆಲದ ಮೇಲೆ ಅಂಗಾತವಾಗಿ ಮಲಗಿಕೊಂಡಿದ್ದನು. ಅವನು ವಯಸ್ಸಿನಿಂದ ಚಿಕ್ಕವನಾಗಿದ್ದ. ದೇಹವೂ ಸುದಾಮನದು. ಅವನೂ ಮೈತುಂಬ ವಿಭೂತಿಯನ್ನು ಬಡಕೊಂಡಿದ್ದ. ಮೊದಲೆ ಬರಿದಾದ ಹೊಟ್ಟೆಯನ್ನು ಜೋರಾಗಿ ಬಡಿದುಕೊಳ್ಳುತ್ತಿದ್ದ. ಅವನ ಬಾಯಿಂದ ಯಾವ ಮಾತುಗಳೂ ಇರಲಿಲ್ಲ. ಹೊಟ್ಟೆಯ ಮಾತುಗಳಷ್ಟೆ ಸಪ್ಪಳದಿಂದ ಕೇಳಬರುವಂತಿತ್ತು.

ಇವರಿಬ್ಬರ ಜೊತೆಗೆ ಏನೂ ಸಪ್ಪಳ ಮಾಡದಲೆ ಮತ್ತೊಂದು ಪ್ರಾಣಿ ಕುಳಿತಿತ್ತು; ಅದು ಸುಂದರವಾದ ನಾಯಿ. ಅದರ ಮಾಟ ಬಹಳ ಚಲುವಾಗಿತ್ತು. ಮೈತುಂಬ ಬಿಳಿ ಕೂದಲುಗಳು ಇದ್ದವು. ಆದರೆ ಆ ಇಬ್ಬರು ಬಿಕ್ಷುಕರ ಸಹ

ವಾಸದ ನೆರಳಿನಿಂದಲೊ ಏನೊ ನಡುನಡುವೆ ಕಪ್ಪು ಕೂದಲುಗಳಿದ್ದವು ಅದು ಕುತ್ತಿಗೆಯನ್ನು ಎತ್ತಿ ಹೋಗುತ್ತಿರುವ ಜನರನ್ನು ತೀಕ್ಷ್ಣವಾಗಿ ನೋಡುತ್ತಿದ್ದಿತು.

ಮಾನವ ಪ್ರಾಣಿಗಳಾದ ಬಿಕ್ಷುಕರ ಸಮಸ್ಯೆಯನ್ನು ವಿಚಾರಿಸುತ್ತಲೆ ಅಂದು ನಾನು ತುಂಗಭದ್ರೆಯ ನೀರಿನ ತೆರೆಗಳಲ್ಲಿ ತೇಲಾಡಿದೆ. ನೀರಿನ ತಂಪು ನನಗೆ ಯಾವ ತಂಪನ್ನೂ ಬೀರಲಿಲ್ಲ. ಆ ಇಬ್ಬರು ಬಿಕ್ಷುಕರು ನೀರಿನಲೆಗಳ ಮೇಲೆಯೆ ನನ್ನೆದುರಿಗೆ ನಿಂತಂತೆಯೆ ಭಾಸವಾಗುತ್ತಿತ್ತು.

ನಾನು ಸ್ನಾನವಮಾಡಿ ತಿರುಗಿ ಬರುವ ಹೊತ್ತಿಗೆ ಬಿಸಿಲು ಬಹಳೇರಿತ್ತು. ದಕ್ಷಿಣ ಭಾರತದಲ್ಲಿ ಬೇಸಿಗೆಯ ದಿನದ ಬಿಸಿಲಿನ ತಾಪವನ್ನು ಅನುಭವಿಸಿದನೇ ಬಲ್ಲ. ಅಂಥ ಉರಿಬಿಸಿಲಿನಲ್ಲಿಯೆ ಭಕ್ತರೆಂದೆನಿಸಿಕೊಳ್ಳುವ ಜನರು ತಿರುಗಾಡುತ್ತಿದ್ದರು. ಆ ಇಬ್ಬರು ಬಿಕ್ಷುಕರು ತಮ್ಮ ಸ್ಥಳದಲ್ಲಿಯೆ ಇದ್ದರು. ಮಲಗಿದವನು ಹಾಗೆಯೆ ಬಿಸಿಲಿನಿಂದ ಕಾದ ಭೂಮಿಯ ಮೇಲೆ ತನ್ನ ಆಸನದಲ್ಲಿಯೆ ಇದ್ದ. ಆ ಕಾವನ್ನು ಅವನು ಹೇಗೆ ತಾಳಿಕೊಳ್ಳುತ್ತಿದ್ದನೊ ? ನಿಂತವನು ಬಿಕ್ಷೆಗಾಗಿ ಇನ್ನೂ ಕಿರುಚುತ್ತಿದ್ದ. ನಾಯಿ ಅವರಿಬ್ಬರನ್ನು ನೋಡುತ್ತ ಅಲ್ಲಿಯೆ ಕುಳಿತಿತ್ತು

ಅವರಿಬ್ಬರೂ ಏನೇನೊ ಮಾತಾಡುತ್ತಿದ್ದರು ನಾನು ಹಲವು ಸಾಮಾನುಗಳನ್ನು ತೆಗೆದುಕೊಳ್ಳಲು ಸಮೀಪದ ಅಂಗಡಿಯಲ್ಲಿಯೆ ನಿಂತುಕೊಂಡಿದ್ದೆ. ಕಣ್ಣುಗಳು ಅಂಗಡಿಯ ಕಡೆಯಿದ್ದರೂ, ಕಿವಿಗಳು ಬಿಕ್ಷುಕರ ಮಾತುಗಳನ್ನು ಕೇಳತೊಡಗಿದ್ದವು. ಬಹು ದಿವಸದಿಂದ ಇಬ್ಬರೂ ಮಿತ್ರರಿರಬೇಕು. ಅನೇಕ ಪುಣ್ಯಕ್ಷೇತ್ರಗಳಲ್ಲಿ ತಿರುಗಾಡಿ ಬಹಳ ಪುಣ್ಯವನ್ನು ಪುಕ್ಕಟೆಯಾಗಿ ಗಳಿಸಿರಬೇಕು. ಅವರ ಬಾಯಲ್ಲಿ ಎಷ್ಟೋ ಪ್ರಸಿದ್ಧ ಕ್ಷೇತ್ರಗಳ ಹೆಸರುಗಳಿದ್ದವು. ಏನೇ ಇದ್ದರೂ ಅವರು ಮಿತ್ರತ್ವವನ್ನು ಕಾದುಕೊಂಡಿರುವುದೇ ಅಲಭ್ಯ ಪುಣ್ಯವೆಂದು ನಾನೆಣಿಸಿದೆ.

"ಏನಗ್ಯಾ ಈ ಜಾತ್ರೆಯ ಜನ ?" ಎಂದು ಎದ್ದು ನಿಂತವನು ಕೆಳಗೆ ಮಲಗಿದವನಿಗೆ ಕೇಳಿದ.

"ಎಷ್ಟು ಹಣ ಸಿಕ್ಕಿರೋದು ?" ಎಂದು ಮಲಗಿದವ ಕುತೂಹಲದಿಂದ ಕೇಳಿದ.

ಮೊದಲಿನವ ಪೈಗಳನ್ನು ಎಣಿಸಿನೋಡಿದ. “ಚಹಾ ಬೀಡಿಗೂ ಸಾಕಾಗುವದಿಲ್ಲ. ಸುಮ್ಮನೆ ತಿರುಪತಿಯಲ್ಲಿದ್ದರೆ ಚೆನ್ನಾಗಿತ್ತು. ತಿರುಗುತ್ತ, ಓಡುತ್ತ ಇಲ್ಲಿಗೆ ಬಂದೆವು.”

“ಹಾಗಾದರೆ ಏನು ಮಾಡೋದು ?”

“ಈ ವೇಷಕ್ಕೆ ಇಲ್ಲಿ ಮಹತ್ವವಿದ್ದಂತೆ ಕಾಣುವದಿಲ್ಲವಯ್ಯಾ. ನೀನು ಹೊಟ್ಟೆ ಬಡಿದುಕೊಂಡರೂ ಯಾರೂ ಕೇಳುವದಿಲ್ಲ. ನಾಳೆ ಮತ್ತೊಂದು ಯೋಚನೆ ಮಾಡೋಣ........”

ನಾರದ ವೇಷದ ಭಿಕ್ಷುಕನು ಮೊಣಕಾಲೂರಿ ಕೆಳಗೆ ಕುಳಿತ. ಮಲಗಿದವನ ಕಿವಿಯಲ್ಲಿ ಹಲವು ಮಾತುಗಳನ್ನು ಹೇಳಿದ. “ನಿನ್ನ ದಹನ ಕಾರ್ಯಕ್ಕಾಗಿ ನಾನು ಹಣ ಬೇಡುವೆ.” ಎಂದ.

“ಅಯ್ಯಾ, ನನಗೆ ಮೊದಲೇ ಮೈಯಲ್ಲಿ ಚನ್ನಾಗಿಲ್ಲ. ಅವರಲ್ಲೂ ಇಲ್ಲಿ ಮಲಗಿ ಮಲಗಿ ನನ್ನ ಬೆನ್ನಲ್ಲಿ ಉರಿಯುತ್ತಿದೆ. ಮೈಯಲ್ಲಿಯು ಉರಿ ಹಾಗೆ ಇವೆ.”

“ಏತಕ್ಕೂ ಹೆದರಬೇಡಯ್ಯಾ. ನಾನು ಇದ್ದೇನೆ”

ಅವರ ಹತ್ತಿರದ ನಾಯಿ ತಾನೂ ಇದ್ದಂತೆ ಬಾಲವನ್ನಾಲಡಿಸಿ ಅವರ ಕಡೆಗೆ ನೋಡಿತು.

ಮರುದಿನ ಮುನ್ನದಿನ ಮಾತನಾಡಿದಂತೆಯೆ ಎಲ್ಲವೂ ವ್ಯವಸ್ಥೆಯಾಗಿತ್ತು. ನಾನು ದೇವಾಲಯಕ್ಕೆ ಹೋಗುವ ಮುಂದೆ ಮುದ್ದಾಂ ಆ ಇಬ್ಬರು ಭಿಕ್ಷುಕರನ್ನು ಗುರುತಿಸಿ ನೋಡಿದೆ. ಸ್ಥಳವನ್ನು ಸ್ವಲ್ಪ ಬದಲಿಸಿದ್ದರು; ವೇಷದಲ್ಲಿಯೂ ಪರಿವರ್ತನೆ ಆಗಿತ್ತು. ಮುನ್ನದಿನ ನಾರದನ ವೇಷವನ್ನು ಹಾಕಿದವನು, ಈಗ ಜಡೆಯನ್ನು ಬಿಟ್ಟ ಸನ್ಯಾಸಿಯಂತೆ ಆಗಿದ್ದ. ಕೆಳಗೆ ಮಲಗಿದವನು ತುಂಬ ಕ್ಯಾವಿಯ ಬಟ್ಟೆಯನ್ನು ಹೊದಿಸಿದ್ದ.

ಯಾವನೇ ಒಬ್ಬ ಅನಾಥ ಭಿಕ್ಷುಕನು ಸತ್ತಿದ್ದಾನೆಂದು ತಿಳಿದ ಕೂಡಲೆ ಎಲ್ಲರೂ ದಾನ ಮಾಡುವವರೆ. ನಿಂತವನ ಕೈಯಲ್ಲಿಯ ಹರಿವಾಣವು ನಾಣ್ಯಗಳಿಂದ ತುಂಬಿ ತುಳುಕುವಂತಾಗಿತ್ತು. ಅದನ್ನು ಭಿಕ್ಷುಕ ನೋಡಿ ಹಿರಿಹಿರಿ

ಹಿಗ್ಗುತ್ತಿದ್ದ. ತನ್ನ ಉಪಾಯ ಚನ್ನಾಗಿ ಸಾಧಿಸಿತೆಂದು ಬಹಳ ಸಂತೋಷ ಬಡುತ್ತಿದ್ದ.

ಅವನನ್ನು ಮಲಗಿಸಿದ ಸಮೀಪದ ದಾರಿಯಲ್ಲಿ ತೇರನ್ನೆಳೆಯುವವರಿದ್ದರು. ತೇರು ಸಜ್ಜಾಗಿ ನಿಂತಿತ್ತು. ಭಕ್ತರೆಲ್ಲರೂ ಜಯಜಯಕಾರ ಮಾಡಲು ಸನ್ನದ್ಧರಾಗಿ ನಿಂತುಕೊಂಡಿದ್ದರು. ಪೂಜಾರಿ ಟೆಂಗಿನಕಾಯಿ ಒಡೆಯುವದೊಂದೆ ತಡ, ತೇರನ್ನೆಳೆಯಲು ಪ್ರಾರಂಭಿಸಿದರು. ಜನರ ಕೂಗು ಆಕಾಶದ ತುಂಬ ಮೊಳಗಿತು. ಉತ್ತತ್ತಿಗಳು ತೇರಿನ ಮೇಲೆಲ್ಲ ಬೀಳುತ್ತಿದ್ದವು.

ತೇರು ಈ ಭಿಕ್ಷುಕರಿದ್ದ ಸ್ಥಳದ ಸಮೀಪದಲ್ಲಿ ಬಂದಕೂಡಲೇ ಗಾಲಿ ಹೊರಳಿದವು. ಮಲಗಿದ ಭಿಕ್ಷುಕನ ಸಮೀಪದಲ್ಲಿ ಜನ ಜಂಗುಳಿ ನುಗ್ಗಿತು. ಭಿಕ್ಷುಕ ಗಾಬರಿಯಾದ. ಮಲಗಿದವನ ಪರಿಸ್ಥಿತಿ ಎಷ್ಟು ವಿಚಿತ್ರವಾಗಿತ್ತೋ? ನಿಂತವನು ತನ್ನ ಉಪಾಯವನ್ನು ಸಾಧಿಸಲು ಹಾಗೆಯೇ ನಿಂತುಬಿಟ್ಟ. ಕೆಳಗೆ ಬಿದ್ದವನು ಸತ್ತಿರುವನೆಂದು ಕೂಗಿಕೊಂಡ. ಜನರು ಅವನಿಗೆ ದೂರ ಸರಿಯಲು ಹೇಳಿದರು. ಹೆಣವನ್ನು ಆಚೆ ಒಯ್ಯಲು ತಿಳಿಸಿದರು. ಅಷ್ಟರಲ್ಲಿ ಅಲ್ಲಲ್ಲಿ ನಿಂತುಕೊಂಡ ಎಷ್ಟೋ ಜನರು ತೇರು ಕೊಂಚ ಹೊರಳಿ ನಿಂತುದನ್ನು ನೋಡಿ ಗಾಬರಿಯಾಗಿ ದಿಕ್ಕೆಟ್ಟು ಓಡಿ ಬಂದರು. ಮಲಗಿದವನ ಗತಿ ಏನಾಯಿತೋ? ನಿಂತ ಭಿಕ್ಷುಕನು ಇನ್ನು ವಾತಾವರಣ ತೀರ ಹದಗೆಡಬಹುದೆಂದೂ, ತನ್ನ ಹೂರಣ ಹೊರಬೀಳಬಹುದೆಂದೂ ಮನವರಿಕೆ ಮಾಡಿಕೊಂಡು, ಮಲಗಿದ ಭಿಕ್ಷುಕನಿಗೆ ತುಂಬ ಮುಸುಕು ಹಾಕಿ ಅವನನ್ನು ಎತ್ತಿಕೊಂಡು ಹೋದ. ಆವರೆ ಆ ಹೊತ್ತಿನಲ್ಲಿ ಮಲಗಿದ ಭಿಕ್ಷುಕನು ಯಾವ ರೀತಿಯಿಂದಲೂ ಮಿಸುಗಾಡಲಿಲ್ಲ.

ಇದು ಆದ ಒಂದು ದಿನದ ತರುವಾಯ, ಒಬ್ಬ ಶ್ರೀಮಂತರು ದೇವತೆಗೆ ನೈವೇದ್ಯವನ್ನು ಮಾಡಿಸಿದ್ದರು. ಆ ಶ್ರೀಮಂತರ ಮಗನು ನನ್ನ ಕೇವಲ ಮಿತ್ರನಾಗಿದ್ದ. ಅವನು ದಾರಿಯಲ್ಲಿ ನನ್ನನ್ನು ನೋಡಿ ಬಹಳ ಜುಲುಮೆ ಮಾಡಿ ನನ್ನನ್ನು ಊಟಕ್ಕೆ ಕರೆದುಕೊಂಡು ಹೋದ. ಪ್ರವಾಸವೆಂದಮೇಲೆ ಹೇಗೆ ತಪ್ಪಿಸಲು ಬರುತ್ತದೆ!

ಎಲೆ ಹಾಕುವದಕ್ಕಿಂತ ಮೊದಲು ಏನೊ ಗುಜು ಗುಜು ಮಾತುಗಳು ಪ್ರಾರಂಭವಾದವು. ಎಲ್ಲಿಯದೊ ಹೊಲಸುವಾಸನೆ ಬರುತ್ತಿದ್ದಿತು. ಹಲವರು ಕುರಿಗಳನ್ನು ಕಡೆದದ್ದು ಇರಬೇಕೆಂದು ಸೂಚಿಸಿದರು. ಹರಕೆಗೆಂದು ತಂದ ಕುರಿಗಳನ್ನು ಮೆರವಣಿಗೆ ಮಾಡಿಸಿ, ದೇವತೆಯ ಎದುರಿಗೇ ಪಟಾಂಗಣದ ಒಂದು ಭಾಗದಲ್ಲಿ ಕಡಿಯುತ್ತಿದ್ದರು. ಎರಡು ಮೂರು ದಿನಗಳಿಂದ ಈ ರೀತಿಯಾಗಿ ದೇವತೆಗೆ ಬಲಿ ಕೊಡುವುದು ನಡೆದುದರಿಂದ, ರಕ್ತ ಧಾರೆಯಾಗಿ ಅಲ್ಲಿ ಹರಿದು ಹೋಗುತ್ತಿತ್ತು. ಅದರ ವಾಸನೆ ಇರಬೇಕೆಂದು ಕೆಲವರು ಅಭಿಪ್ರಾಯಬಟ್ಟರು.

ಅಷ್ಟರಲ್ಲಿಯೆ ಒಬ್ಬರು ಬಂದು "ಅದು ಯಾಕ ಆಸುತ್ತದರಿ ? ಹೆಬ್ಬಾಗಿಲದ ಹತ್ತಿರವೆ ಒಂದು ಹೆಣ ಬಿದ್ದಿದೆ." ಎಂದು ಹೇಳಿದರು.

ಆ ಸುದ್ದಿ ಕೇಳಿದವರೆಲ್ಲ ಹೌಹಾರಿದರು. ಯಾರದು ಎಂದು ಕೇಳಬೇಕೆಂಬ ಕುತೂಹಲದಲ್ಲಿದ್ದರು. ಆ ಸುದ್ದಿ ತಂದವರು ತಾವಾಗಿಯೇ ಬೇಗನೆ ಉತ್ತರ ಕೊಟ್ಟರು. "ಯಾವನೋ ಒಬ್ಬ ಭಿಕಾರಿ, ಸನ್ಯಾಸಿ ಸತ್ತು ಬಿದ್ದಾನೆ."

ಬಾಗಿಲದಲ್ಲಿ ಹೆಣವನ್ನು ಇಟ್ಟುಕೊಂಡು ಊಟಕ್ಕೆ ಕೂಡ್ರುವದೆಂದರೆ ಬಹಳ ಜನರಿಗೆ ಅಸಹ್ಯವೆನಿಸಿತು. ಅದೇ ಹೊತ್ತಿಗೆ ಆಗರ್ಭ ಶ್ರೀಮಂತರಾದ ರಾಯರು ಅಲ್ಲಿಗೆ ಆಗಮಿಸಿದರು. ಅವರು ಜರತಾರಿ ಕೆಂಪು ಬಣ್ಣದ ಬಟ್ಟೆ ಉಟ್ಟಿದ್ದರು. ಹೊಟ್ಟೆ ಗಣಪತಿಯದು. ಬ್ರಹ್ಮಾಂಡದಂತಿರುವ ಹೊಟ್ಟೆಯ ಮೇಲೆ ಕೈಯಾಡಿಸುತ್ತ ಅಲ್ಲಿ ನಡೆದ ಸಂತಿಯ ಬಗ್ಗೆ ಕೇಳಿದರು.

ನಾವು ಹಲವು ಜನ ಹೊರಗೆ ಹೋಗಿ ನೋಡಿದೆವು. ಪಾಳಿಯ ಗೋಡೆಯ ಹತ್ತಿರದ ಬಂಡೆಗಲ್ಲುಗಳಲ್ಲಿ ಒಂದು ಹೆಣ ಬಿದ್ದಿತ್ತು. ಅದರ ಸಸಿಹದಲ್ಲಿ ಒಂದು ನಾಯಿ ವಾಸನೆ ನೋಡುತ್ತ ತಿರುಗುತ್ತಿತ್ತು. ಆ ನಾಯಿಯನ್ನು ನೋಡಿದ ಕೂಡಲೆ ಅದು ನಾನು ನೋಡಿದ ಭಿಕ್ಷುಕರದೆಂದೇ ಗೊತ್ತಾಯಿತು. ಸತ್ತಂತೆ ಮಲಗಿದವನು, ಪೂರ್ಣವಾಗಿ ನಿಜವಾಗಿ ಯಾವಾಗ ಸತ್ತು ಹೋಗಿದ್ದನೊ ? ಮೊದಲೆ ರೋಗಿಯಿದ್ದವನು ಬಿಸಿಲಿನ ಕಷ್ಟವನ್ನು ಜನರ ತುಳಿತವನ್ನು ಸಹಿಸಲಾರದೆ ಸತ್ತಿದ್ದನೋ ? ಅಥವಾ ಬಹಳ ಹೆಣ ಗಳಿ

ಸಿದ ಮಿತ್ರನು ಅವನನ್ನು ಕೊಂದು....ಹೀಗೆ ಸಾವಿನ ಗುಟ್ಟನ್ನರಿಯದೆ ಅನೇಕ ವಿಚಾರಗಳು ಬಂದವು.

ರಾಯರು ಹಲವು ಭಿಕ್ಷುಕರನ್ನು ಕರೆದು " ಇದು ಯಾರ ಹೆಣ ? ಇದನ್ನು ಇಲ್ಲಿಂದ ತೆಗೆದು ಅಂತ್ಯ ಕಾರ್ಯ ಮುಗಿಸಿರಿ. ನಿಮಗೆ ಏನಾದರೂ ಕೊಡುತ್ತೇನೆ " ಎಂದು ಹೇಳಿದರು.

ಆದರೆ ಯಾವ ಭಿಕ್ಷುಕನೂ ಆ ಕೆಲಸಕ್ಕೆ ಒಪ್ಪಲಿಲ್ಲ. ಅವನು ತಮ್ಮವನಲ್ಲವೆಂದೂ, ಆ ಕೆಲಸವನ್ನು ತಾವು ಮಾಡಲಾರೆವೆಂದೂ ಹೇಳಿ ಹೊರಟು ಹೋದರು. ಹೋಗುವಾಗ ತಮ್ಮ ತಮ್ಮ ಕಿವಿಗಳಲ್ಲಿ ಏನೋ ಮಾತನಾಡಿಕೊಂಡರು. ಭಯಭೀತರಾದಂತೆ ಮುಖಚರ್ಯೆಯಿತ್ತು.

ಇದು ರಾಯರಿಗೆ ಬಹಳ ಚಿಂತೆಯನ್ನುಂಟುಮಾಡಿತು. ಒಳಗೆ ಅನೇಕ ಸತ್–ಗೃಹಸ್ಥರು ಹಸಿದು ಕುಳಿತಿದ್ದರು. ಬಾಗಿಲದಲ್ಲಿ ಈ ದೃಶ್ಯ. ಅವರಿಗೆ ಏನು ಮಾಡಬೇಕೆಂಬುದು ಸ್ವಲ್ಪ ಗೊಂದಲಕ್ಕಿಟ್ಟಿತು.

ಅವರು ಚಿಂತಾತುರರಾಗಿ ನಿಂತಾಗ ಒಬ್ಬ ಗಡ್ಡದ ಸನ್ಯಾಸಿ ಅವರ ಹತ್ತಿರ ಬಂದ. " ನೀವು ಹೇಳಿದ ಕೆಲಸ ನಾನು ಮಾಡ್ತೇನೆ" ಎಂದ.

" ಅವನು ನಿನ್ನ ಪೈಕಿ ಏನು ? " ಎಂದು ರಾಯರು ಪ್ರಶ್ನಿಸಿದರು.

" ಹಾಗೇನೂ ಅಲ್ಲ. ಆದರೆ ಕಡೆಯ ಕೆಲಸ ನಾನು ಮಾಡಲು ತಯಾರು ಇದ್ದೇನೆ " ಎಂದನು.

" ಹಾಗಾದರೆ ಬೇಗ ಮುಗಿಸಿಬಿಡು, ಹೋಗು. "

" ಅಲ್ಲ ಸ್ವಾಮಿ, ಎಲ್ಲ ಕೆಲಸ ಮುಗಿಸಲಿಕ್ಕೆ...." ಸನ್ಯಾಸಿ ಕೈ ಮುಂದು ಮಾಡಿದ.

ರಾಯರು ಐದು ರೂಪಾಯಿಗಳನ್ನೆಸೆದರು.

" ಸ್ವಾಮಿ, ಈ ಕೆಲಸ ಸಾಮಾನ್ಯವಲ್ಲ. ಎಷ್ಟೋ ಜನ ಒಪ್ಪಿಗೆ ಕೊಟ್ಟಿಲ್ಲ. ನೋಡಿ ಸ್ವಾಮಿ "

" ಹೆಚ್ಚಿಗೆ ಮಾತಾಡಬೇಡ, ತಗೋ " ಎಂದು ರಾಯರು ಟೊಂಕದ

ಲ್ಲಿದ್ದ ಎರಡು ರೂಪಾಯಿ ತೆಗೆದು ಚಲ್ಲಿದರು. ಹೇಗಾದರೂ ಕಾರ್ಯವಾಗು ವುದು ಅವರಿಗೆ ಬೇಕಾಗಿತ್ತು.

ಅದನ್ನು ನೋಡಿ ಆ ಸನ್ಯಾಸಿಗೆ ಹಿಡಿಸಲಾರದಷ್ಟು ಸಂತೋಷವಾ ಯಿತು. ಜಿಗಿಯುತ್ತ ಜಿಗಿಯುತ್ತ ತನ್ನ ಕೆಲಸಕ್ಕೆ ಹೋದ. ನನ್ನ ಜೊತೆ ಯಿದ್ದ ಜನರು ಸಂತೋಷದ ಊಟಕ್ಕೆ ಒಳಗೆ ಧಾವಿಸಿದರು. ನನ್ನ ಮನಸ್ಸು ವಿಚಿತ್ರವಾದ ಊಟವನ್ನು ಮಾಡುತ್ತ ನಿಂತಲ್ಲಿಯೆ ನಿಂತಿತ್ತು.

ನಾಯಿಗಿಂತಲೂ ಕೀಳಾಗಿ ಬಿದ್ದಿದ್ದ ಆ ಹೆಣವನ್ನು ಬಂಡೆಗಲ್ಲುಗಳಿಂದ ಹೊರಗೆ ಜಗ್ಗಿದ. ಅದಕ್ಕೆ ತನ್ನ ಮೈಮೇಲಿನ ಬಟ್ಟೆಯೊಂದನ್ನು ಹೊದಿಸಿದ. ಅದನ್ನು ಒಮ್ಮೆಲೆ ಎತ್ತಲು ಹೋದ. ಹೆಣ ಕೈಜಾರಿ ಕೆಳಕ್ಕೆ ಬಿದ್ದಿತು. ಮುಖದ ಮೇಲಿನ ಪರದೆ ದೂರವಾಯಿತು.

ಆ ಮುಖ ನೋಡಿದೊಡನೆ ನಾನು ಗಾಬರಿಯಾದೆ. ಯಾರೋ ಕುತ್ತಿ ಗೆಯನ್ನು ಜೋರಾಗಿ ಹಿಚುಕಿದುದರಿಂದ ನಾಲಗೆ ಹೊರಬಿದ್ದಿತು. ಒಂದು ಕ್ಷಣ ನನ್ನ ಕಣ್ಣಿಗೆ ಚಕ್ರ ಬಂದಂದಾಯಿತು.

ಸನ್ಯಾಸಿ ಹೆಣವನ್ನು ಹೆಗಲ ಮೇಲೆ ಹಾಕಿಕೊಂಡ; ತುಸು ದೂರದ ಲ್ಲಿದ್ದ ನಾಯಿ ಒದರುತ್ತ ಅವನ ಬೆನ್ನು ಹತ್ತಿತು.

ಸೂಕ್ಷ್ಮವಾಗಿ ಆ ಸನ್ಯಾಸಿಯನ್ನು ಪರೀಕ್ಷಿಸಿ ನೋಡಿದೆ. ನನಗೆ ಒಮ್ಮೆಲೆ ಮನದಟ್ಟಾಯಿತು. ಕೆಳಗೆ ಮಲಗಿದ ಮನುಷ್ಯನೆ ಅವನಾಗಿದ್ದ. ಗಡ್ಡ ಹಚ್ಚಿ ಕೊಂಡು, ಜಡೆಗಳನ್ನು ಬಿಟ್ಟು ವೇಷ ಬದಲು ಮಾಡಿದುದರಿಂದ ಈ ನಾಟಕದ ಪಾತ್ರ ಪರಿಚಯ ಬೇಗನೆ ಆಗಿರಲಿಲ್ಲ.

ಅವನು ದಡದಡನೆ ಬಂಡೆಗಲ್ಲುಗಳನ್ನು ಇಳಿಯುತ್ತ ಕೆಳಗೆ ನೀರಿನ ಕಡೆಗೆ ಹೋದ. ಅವನು ದಹನದ ಯಾವ ಕಾರ್ಯವನ್ನೂ ಮಾಡಲಿಲ್ಲ. ನಡು ನೀರಿನಲ್ಲಿ ಅವನನ್ನು ಒಯ್ದು ಅಲ್ಲಿ ಮುಳುಗಿಸಿಬಿಟ್ಟ.

ಜೀವನದ ಮೇಲ್ಮಟ್ಟದಂತಿದ್ದ ಆ ಎತ್ತರದಾದ ಗುಡ್ಡದ ಮೇಲೆ ನಿಂತು ನಾನು ಇದನ್ನೆಲ್ಲ ನಿರೀಕ್ಷಿಸಿದೆ.

* ತುಂಗಭದ್ರೆ ತನ್ನ ನೀರಿನ ಸೆರಗಿನಲ್ಲಿ ಅವನನ್ನು ಮುಚ್ಚಿಕೊಂಡು ಬಿಟ್ಟಳು. ನೀರಿನ ತುಷಾರಗಳು ಹಾರುತ್ತ ಹಾರುತ್ತ ಹಾಗೆಯೆ ಅವ್ಯಾಹತ ವಾಗಿ ಸಾಗಿದವು. ಇಂಪಾದ ಧ್ವನಿ ಮಾಡಿದವು.

ದಹಸ ದಕ್ಷಿಣೆಯನ್ನು ಮುಷ್ಟಿಯಲ್ಲಿ ಹಿಡಿದುಕೊಂಡು ನಗುತ್ತ ಸನ್ಯಾ ಸಿಯು ಮತ್ತೆ ಬಿಕ್ಷಾಟನೆಗಾಗಿ ಹುರುಪಿನಿಂದ ಸಾಗಿದ.

ನಂಬುಗೆಯ ನಾಯಿ ಮಾತ್ರ ನದಿಯ ದಂಡೆಯಲ್ಲಿಯೆ ನಿಂತು ಒದರು ತ್ತಿತ್ತು !

ಪ್ರಶಾಂತವಾದ ತುಂಗಭದ್ರಾ ನದಿಯ ಈ ಪ್ರವೇಶಕ್ಕೆ ಬಂದಾಗಲೆಲ್ಲ ನನಗೆ ಆ ಇಬ್ಬರು ಭಿಕ್ಷುಕರು ನೆನಪಾಗಿ ಅಲ್ಲಿಯ ಶಾಂತ ವಾತಾವರಣವೆಲ್ಲ ಒಮ್ಮೆಲೆ ಕದಡಿದಂತಾಗುತ್ತದೆ.



# ಬಾಡಿದ ಹೂ



ಆಗಸ್ಟ ೧೫ರ ಬೆಳಗು!

ಪಾಪಾತ್ಮ ಜೀವಿಗಳ ಪಾಪವೆಲ್ಲ ಕೊಚ್ಚಿ ಹೋಗುವಂತೆ ರಾತ್ರಿಯಲ್ಲಿ ಒಂದೇ ಸಮನೆ ಜೋರಾಗಿ ಮಳೆ ಬಡಿದಿತ್ತು. ತಮ್ಮ ಉತ್ಸಾಹ ಪ್ರದರ್ಶಿಸಲು ಮಳೆ ಬಿಡುವುದೊ ಇಲ್ಲವೊ ಎಂಬುವಷ್ಟು ಜಡಿಮಳೆ. ಆದರೆ ಬೆಳಗು ಮೋಡಗಳ ಮೊತ್ತದಿಂದ ದೂರವಾಯಿತು. ಜನರಿಗೆ ಹೊಸ ಚೇತನ ಬಂದಂತಾಗಿ ಎಲ್ಲರೂ ತಂಡತಂಡವಾಗಿ ಮನೆಗಳಿಂದ ಹೊರಬಿದ್ದರು.

ವಿಸ್ತೀರ್ಣ ಬಯಲಿನಲ್ಲಿ ಧ್ವಜವಂದನೆ. ಮೈದಾನವೆಲ್ಲವೂ ಜನರಿಂದ ಕಿಕ್ಕಿರಿದು ತುಂಬಿತ್ತು. ಯಾವ ಗೂಡಿನಿಂದಲೊ ಅಸಂಖ್ಯಾತ ಬಿಳಿ ಪಾರಿವಾಳಗಳು ಹಾರಿ ಬಂದಂತೆ ಬಿಳಿ ಟೋಪಿಗಳ ಪ್ರದರ್ಶನವಿತ್ತು. ತಮ್ಮ ನೂರ್ಮಡಿಯಾದ ಕುತೂಹಲವನ್ನು ವ್ಯಕ್ತಪಡಿಸಲು ಹಲವರು ಕಪಿರಾಯನ ಆಸ್ಥಾನವಹಿಸಿದ್ದರು- ಅಂದರೆ ಗಿಡದಮೇಲೆ ಕುಳಿತಿದ್ದರು. ಎಲ್ಲರ ಮುಖಗಳಲ್ಲಿ ಮೆಲುನಗೆ ಮಿಂಚಿ ಮಿಂಚಿ ಮಾಯವಾಗುತ್ತಿತ್ತು.

ನಾಗರಾಜರು ಜನಸಂದಣಿಯಲ್ಲಿ ನುಗ್ಗಿ ಮುಂದೆಮುಂದೆಯೆ ಬಂದಿದ್ದರು. ಅವರು ಧ್ವಜವಂದನೆಯಾಗುವ ಸ್ಥಳದ ಸನ್ನಿಹದಲ್ಲಿಯೆ ನಿಂತುಕೊಂಡಿದ್ದರು. 'ಅವರದು ಮುದಿ ವಯಸ್ಸು' ಎಂದು ಜನರು ಅನ್ನಬೇಕೆ ಹೊರತು, ಅವರು, ತಾವೆಂದಿಗೂ ಹಾಗೆ ತಿಳಿದುಕೊಂಡಿರಲಿಲ್ಲ. ಅವರು ಕೈಯಲ್ಲಿ ಹಿಡಿದ: ದಪ್ಪವಾದ ಆಸಂಗೋಲಷ್ಟೆ ಅವರ ಮುದಿತನದ ಲಕ್ಷಣ. ಹರೆಯದ ಹುಮ್ಮಸು ಅವರಲ್ಲಿ ಕಡಿಮೆಯಿರಲಿಲ್ಲ. ಪ್ರತಿಯೊಂದು ಕಾರ್ಯದಲ್ಲಿ ಮುಂದೆಯೆ ಧಾವಿಸುತ್ತಿದ್ದರು.

ಸರಿಯಾಗಿ ಏಳು ಗಂಟೆ. ಜಯಭೇರಿಯ ಗುಡುಗು ಮೊಳಗಿತು. ಜನ ಹುಚ್ಚೆದ್ದು ಒದರಿತು. ಬಹಳ ದಿನಗಳ ತರುವಾಯ ಹೊರಟ ಸ್ವಾತಂತ್ರ್ಯದ

ಕೂಗು ಸಾಮಾನ್ಯವಾದುದೆ ? ತುಬಾಕಿಗಳು ಹಾರಿದವು. ವಾದ್ಯಗಳು ಬಾಜಿಸಿದವು. ಸ್ವಾತಂತ್ರ್ಯದ ರಾಷ್ಟ್ರದ ಬಾವುಟ ಗಾಳಿಯಲ್ಲಿ ಮೊದಲ ಸಲ ಪಟಪಟನೆ ಹಾರಿದಾಗ ಮೂರು ಬಣ್ಣದ ಹೂಗಳು ಧ್ವಜದಮೇಲೆ ಹೂಮಳೆ ಕರೆದುವು.

ತಮ್ಮ ಕತ್ತನ್ನೆತ್ತಿ ನಾಗರಾಜ ನೋಡಿದರು. ಅದೊಂದು ಅಪೂರ್ವ ದೃಶ್ಯ! ಮೂಡಣದಲ್ಲಿ ಮೋಡಗಳಿಂದ ಬಿಡುಗಡೆ ಹೊಂದಿದ ನೇಸರನೂ ಇದನ್ನೆಲ್ಲ ನೋಡಿ ಸಂತಸಪಡುತ್ತಿದ್ದ. ಅವನ ಹೊಂಬಣ್ಣದ ಕದಿರುಗಳು ಬಾವುಟ ಮುಟ್ಟಿ ಮುಟ್ಟಿ ನೋಡುತ್ತಿದ್ದವು. ಅಸಂಖ್ಯಾತ ಜನರು ತಮ್ಮ ಮೊಗವೆತ್ತಿ ರಾಷ್ಟ್ರಧ್ವಜವನ್ನು ನಿರೀಕ್ಷಿಸುತ್ತಿದ್ದರು. ನಾಗರಾಜ ಧ್ವಜವನ್ನು ಪೂಜಿಸಿ ಕೆಳಗೆ ಬಂದ ಹೂವನ್ನು ಸಂತೋಷದಿಂದ ಆರಿಸಿ ತೆಗೆದುಕೊಂಡರು.

ಅಷ್ಟರಲ್ಲಿಯೆ ಯಾರದೊ ಭಾಷಣ ಕೇಳಬರಹತ್ತಿತು. ಭಾಷಣಕಾರರು ಮೊದಲು ಹೊಸ ರಾಷ್ಟ್ರಧ್ವಜದಲ್ಲಿರುವ ಚಕ್ರದ ಇತಿಹಾಸವನ್ನು ಹೇಳಿದರು. ಹಾಗೆಯೆ ಮುಂದೆ ಸಾಗಿ ಅವರು ಸ್ವಾತಂತ್ರ್ಯ ದೊರೆಯಲಿಕ್ಕೆ ಕಾರಣರಾದ ದಿವಂಗತ ವೀರ ಸೈನಿಕರನ್ನು ನೆನೆಯಬೇಕೆಂದೂ ಹೇಳುತ್ತಿದ್ದರು.

ಏನನ್ನುತ್ತಿದ್ದಾರೆ? ನಾಗರಾಜ ಕಿವಿಗೊಟ್ಟು ಕೇಳಿದರು. 'ಮಡಿದ ವೀರರು!' ಆ ಮಾತು ಅವರ ಕರ್ಣಪಟಲಗಳನ್ನು ಭೇದಿಸಿತು. ಮುಂದೆ ಭಾಷಣವನ್ನು ಕೇಳುವುದು ಅವರಿಗೆ ಸಾಧ್ಯವಾಗಲಿಲ್ಲ. ಕೈಯಲ್ಲಿ ಓಡಿದ ಬಡಿಗೆಯೆ ನಡುಗಹತ್ತಿತು. ಅದನ್ನು ಕೈಯಿಂದ ಬಿಗಿಯಾಗಿ ಒಡಿದು ಧೈರ್ಯ ತಂದುಕೊಳ್ಳಲು ಯತ್ನಿಸಿದರು. ಪ್ರೇಮದ ಧ್ವಜವನ್ನಾದರೂ ನೋಡಿ ಸಂತೋಷಪಟ್ಟು ತಮ್ಮ ಹೆದರಿಕೆಯನ್ನು ದೂರ ಮಾಡಬೇಕೆಂದರು. ಧ್ವಜ! ಮೂರು ಬಣ್ಣದ ಧ್ವಜ! ಎಷ್ಟು ಸುಂದರ! ಎಂದು ತಮ್ಮ ಮನದಲ್ಲಿಯೆ ನೆನಸಿಕೊಂಡರು. ಆದರೆ ಅಷ್ಟರಲ್ಲಿಯೆ ಅದರ ಮಧ್ಯದಲ್ಲಿರುವ ಚಕ್ರದ ನೆನಪಾಯಿತು. ಮನದಲ್ಲಿಯೆ ಚಕ್ರವು ತಿರುಗಲಾರಂಭಿಸಿತು. ಕೆಳಗೆ ಜಗತ್ತೆಲ್ಲವೂ ಗರಗರನೆ ಹೊರಳಿದಂತಾಯಿತು. ಇವರನ್ನು ಜೋರಿಂದ ತಿರುಗಿಸಿ ಒಮ್ಮೆಲೆ ಕೈಬಿಟ್ಟಂತಾಯಿತು. ನಾಗರಾಜ ಅಲ್ಲಿಂದ ಕಾಲ್ತೆಗೆಯಬೇಕಾಯ್ತು.

ಟಾಂಗಾದ ಎರಡು ಗಾಲಿಯ ಚಕ್ರಗಳೂ ತಿರುಗಿದವು. ಮಧ್ಯದಲ್ಲಿ

ರಾಯರು....? ಆಗ ಭಾಷಣಕಾರರು ಹುತಾತ್ಮರ ಬಗ್ಗೆ ಹೇಳುವ ಮಾತು ದೂರದಿಂದ ಧ್ವನಿವಾಹಕ ಯಂತ್ರದ ಮೂಲಕ ಕೇಳಬರುತ್ತಿದ್ದವು.

ನಾಗರಾಜರು ಆ ಊರ ಪ್ರಸಿದ್ಧ ವ್ಯಾಪಾರಿಗಳು, ಪಟ್ಟೆಕಾರರು. ಮೊದಲು ಶೀರೆಗಳನ್ನು ನೇದು ಸ್ವಲ್ಪ ಪ್ರಮಾಣದಲ್ಲಿ ವ್ಯಾಪಾರ ಮಾಡುತ್ತ ಆಮೇಲೆ ಲಕ್ಷ್ಮಿಯ ಕಟಾಕ್ಷಕ್ಕೆ ಪಾತ್ರರಾದವರು. ಅವರ ಮೂಲ ಹೆಸರು ನಾಗೋಸಾ ಎಂದು. ಆದರೆ ದೊಡ್ಡವರಾದಮೇಲೆ ಅವರಿಗೆ ಆ ಹೆಸರೇಕೊ ಸರಿಯೆನಿಸಲಿಲ್ಲ. ನಾಗರಾಜ ಎಂದು ಸುಧಾರಿಸಿದ ಹೆಸರನ್ನು ಇಟ್ಟುಕೊಂಡರು. ಊರ ಹೊರಗೆ ಇರುವ ಅವರ ಅಂಬಾನಿವಾಸವೂ ಎಲ್ಲರಿಗೂ ಗೊತ್ತಿದ್ದ ಮನೆಯಾಗಿತ್ತು.

ಬಾಗಿಲ ಸಪ್ಪಳವಾಯಿತು. ಅಂಬೂತಾಯಿ ಇಣಿಕಿ ನೋಡಿದಳು. ನಾಗರಾಜರು ಕೋಣೆಯಲ್ಲಿ ಹೋದುದನ್ನು ನೋಡಿ ಹಾಗೆಯೇ ಒಳಗೆ ಹೋದಳು.

ತುಸು ನಿಮಿಷದಲ್ಲಿಯೇ ಕೋಣೆಯಿಂದ ನರಳುವ ಧ್ವನಿ ಕೇಳಬಂದಿತು. ಇದೇನಾಯಿತೊ ಎಂದು ಮತ್ತೆ ಹೊರಗೆ ಬಂದಳು. ಗಂಡ ಮಂಚದಮೇಲೆ ಇದ್ದರು. ತಲೆಗೆ ಇಂಬಾಗಬೇಕೆಂದು ಒಂದು ತಲೆದಿಂಬು ಇಟ್ಟುಕೊಡಿದ್ದರು. ಆದರೆ ಅದರಿಂದ ಯಾವ ಸೌಖ್ಯವೂ ಅವರಿಗೆ ಅನಿಸಲಿಲ್ಲ. ಉಶ್ಶೆಂದುಕಾಲು ಒಗೆಯುತ್ತಿದ್ದರು.

ಅಂಬೂತಾಯಿಗೆ ಮಾತು ಬಹಳ ಕಡಿಮೆ; ಮೂಕರ ಜಾತಿಯವಳು. 'ಏನಾಗಿದೆ' ಎಂದಿಷ್ಟೆ ಕೇಳಿದವಳೆ, ತನ್ನ ಕಾರ್ಯತತ್ಪರತೆಯಲ್ಲಿ ಮಗ್ನಳಾದಳು. ನಾಗರಾಜರಿಗೆ ಏನಾಗಿದೆ ಎಂಬುದನ್ನು ಬಹು ಬೇಗ ತಿಳಿದುಕೊಂಡಳು. ಅದರಲ್ಲಿ ಅವಳು ಚಾಣಾಕ್ಷಳು. ಅಮೃತಾಂಜನವನ್ನು ತೆಗೆದುಕೊಂಡು ಅವರ ಹಣೆಗೆ ಹಚ್ಚಿದಳು. ತಲೆ ತಿಕ್ಕಿದಳು. ಆ ಶೀತಲಕರ ಸ್ಪರ್ಶ, ಆ ಬಳೆಗಳ ಸಪ್ಪಳ ಮದುವೆಯಾಗಿ ಮೂವತ್ತು ವರ್ಷವಾಗಿದ್ದರೂ, ಅವರಿಗೆ ಸ್ವಲ್ಪ ಸಮಾಧಾನವನ್ನುಂಟುಮಾಡತೊಡಗಿತ್ತು.

ಏನೊ ಮಾತನಾಡಬೇಕೆಂದು ನಾಗರಾಜರು ಮುಖ ಮೇಲಕ್ಕೆತ್ತಿ ನೋಡಿದರು. ಅಂಬೂತಾಯಿಯ ಕಣ್ಣುಗಳಲ್ಲಿ ನೀರು! ಆ ನೀರು ಇವರ ಗಲ್ಲಗಳ ಮೇಲೆಯೆ ಬಿದ್ದವು. ಅವು ಬಿಸಿಯಾಗಿದ್ದವು. ದುಃಖದಿಂದ ಕುದಿದುಬಂದ

ಕಂಬನಿಗಳು ಅವು. ನಾಗರಾಜ 'ಏನು? ಹೀಗೇಕೆ?' ಎಂದು ಕೇಳ ಬೇಕೆಂದರು, ಕೇಳಿದರು. ಅಷ್ಟರಲ್ಲಿಯೇ ಅವಳಿಗೆ ಅಳುವು ಜೋರಾಗಿಯೆ ಬಂದಿತು. ಸೆರಗಿನಿಂದ ಕಣ್ಣು ಮುಚ್ಚಿಕೊಂಡು ಒಳಗೆ ನಡೆದೇಬಿಟ್ಟಳು.

ನಾಗರಾಜ ಅವಳ ಹಿಂದೆಯೆ ಎದ್ದು ಹೋದರು. ನಡುಮನೆಯಲ್ಲಿ ಅಡಿ ಯಿಟ್ಟರು. ಅಲ್ಲಿ ದೊಡ್ಡ ಆಕಾರದ ಮೋಹನನ ಭಾವಚಿತ್ರವನ್ನು ತೂಗ ಹಾಕಿತ್ತು. ಅಂಬೂತಾಯಿ ಆ ಚಿತ್ರಕ್ಕೆ ಹಾರವನ್ನು ಹಾಕಲುಹೋಗಿ ಒಂದು ಮೂಲೆಗೆ ಕಟ್ಟಿದ್ದಳು. ಇನ್ನೊಂದೆಡೆಗೆ ಕಟ್ಟದೆ ಇದ್ದುದರಿಂದ ಆ ಮಾಲೆ ಹಾಗೆಯೆ ತೂಗಾಡುತ್ತಿತ್ತು. ನಾಗರಾಜರಿಗೆ ಎಲ್ಲವೂ ಅರ್ಥವಾಯಿತು.

ಮನೆಯಲ್ಲವೂ ಶೂನ್ಯವಾಗಿತ್ತು; ಮನವೂ ಶೂನ್ಯವಾಗಿತ್ತು. ಮನೆ ಯಲ್ಲಿ ಇಬ್ಬರೆ; ಒಬ್ಬರೊಬ್ಬರ ಮುಖನೋಡಿ ಹೇಗೆ ಹೊತ್ತುಗಳೆಯಬೇಕು? ಹೀಗಾಗಿ ನಾಲ್ಕು ವರ್ಷವಾಗಿಹೋಯಿತು. ಇದ್ದ ಒಬ್ಬ ಮಗಳು ಅತ್ತೆಯ ಮನೆಯಲ್ಲಿ. ಅವಳು ಗಂಡನ ಸೊತ್ತು. ಹಬ್ಬಕ್ಕೆ ಹುಣ್ಣಿಮೆಗೆ ತನ್ನ ಮಗ ಳನ್ನು ಕರೆದುಕೊಂಡು ಬಂದು ಹಲವು ದಿನ ಇದ್ದು ಹೋಗುವಳು. ಬಹಳ ದಿನ ತಾಯಿಯ ಹತ್ತಿರ ಹೇಗೆ ಇದ್ದಾಳು? ಮಗ........? ಮಗನ ಗತಿ....? ಮಗನಿಲ್ಲದ ಮನೆ ದೇವರಿಲ್ಲದ ದೇವಾಲಯವಾಗಿತ್ತು. ತಂದೆತಾಯಿಗಳಿಗೆ ಮಗನೆ ಭೂಷಣವೆಂದು ಹೇಳುತ್ತಾರೆ. ಆದರೆ....? ಮನೆಯಲ್ಲಿ ಬೇಕಾದಷ್ಟು ಸಂಪತ್ತಿದೆ. ಆದರೆ....? ಎಲ್ಲವೂ ಆಳುಗಳ ಪಾಲು. ಏನಾಯಿತು ಜೀವನ? ಮೋಹನ ಮಾತು ಕೇಳಿದ್ದರೆ? ನಾಗರಾಜ ಹೊರಬಾಗಿಲಿಗೆ ಬಂದು ಎಲ್ಲವನ್ನು ಮರೆಯಬೇಕೆಂದರು.

ಹೊರಬಾಗಿಲಕ್ಕೆ ಆಳುಮನುಷ್ಯನು ತಳಿರುತೋರಣ ಕಟ್ಟಿದ್ದ. ತ್ರಿರಂಗ ಧ್ವಜ ಮನೆಯಮೇಲೆ ಏರಿಸಿದ್ದ. ಓಣಿಯಲ್ಲಿ ಹುಡುಗ ಹುಡಿಗೆಯರ ಗುಂಪೊಂದು ರಾಷ್ಟ್ರಧ್ವಜಗಳನ್ನು ಹಿಡಿದುಕೊಂಡು ರಾಷ್ಟ್ರಗೀತೆಗಳನ್ನು ಹಾಡುತ್ತ ಹೋಗುತ್ತಿತ್ತು.

ನಾಲ್ಕು ವರ್ಷಗಳ ಹಿಂದೆ ಹೀಗೆಯೆ ಮೋಹನ....! ರಾಷ್ಟ್ರಧ್ವಜ....! ನಾಗರಾಜರಿಗೆ ಕಣ್ಣಿಗೆ ಚಕ್ರ ಬಂದಂತಾಯಿತು. ಮತ್ತೆ ತನ್ನ ಕೋಣೆಯನ್ನು ಪ್ರವೇಶಿಸಿದರು.

ತಲೆಯ ಚಿಟಿಚಿಟಿ ಕಡಿಮೆಯಾಗಲಿಲ್ಲ. 'ಫೋನೊಯಂತ್ರ'ವನ್ನು ತೆರೆದು 'ರಿಕಾರ್ಡ' ಹಚ್ಚಿದರು. ಮನಸ್ಸಿನಲ್ಲಿ ಶಾಂತಿ ಪಡೆಯಬೇಕೆಂದರು. ಆ ಯಂತ್ರ ಹಾಡಲು ಆರಂಭಿಸಿತು. —"ಏನು ಸುಖ?"

ನಾಗರಾಜರ ಸನಿಹದಲ್ಲಿಯೆ ನಿಂತು ಅಂಬೂತಾಯಿ ಕೇಳಿದರು—"ಏನು ಸುಖ? ಸೊಸಿ....ನೊಮ್ಮಗ...." ಇಷ್ಟು ನಾಲ್ಕು ಶಬ್ದಗಳನ್ನು ಆಡಬೇಕಾದರೆ ಅವಳ ನಾಲಗೆ ಥತ್ತರಿಸಿತು. ತಾಯಿಯ ಕರುಳು ಸುಮ್ಮನೆ ಬಹಳ ದಿನವಿರಲು ಹೇಗೆ ಸಾಧ್ಯ!

"ಮತ್ತೆ ಅದೇ ಮಾತು? ಮರೆತದ್ದು ಮರೆತುಹೋಯಿತು. ಸುಮ್ಮಸುಮ್ಮನೆ ಎಕೆ ಅದನ್ನು ಕೆದರುತ್ತಿರುವಿ?" ಸ್ವಲ್ಪ ಜೋರಾಗಿಯೇ ನುಡಿದರು. ಅಷ್ಟರಲ್ಲಿಯೆ ಅಂಬೂತಾಯಿಯ ಬೆನ್ನು ಅವರಿಗೆ ಕಾಣಿಸಿತು. ಅವರ ರೂಢಿಯೆ ಹಾಗೆ ಇತ್ತು.

ಅವಳು ಮರೆಯಾದ ಮರುಗಳಿಗೆಯಲ್ಲಿಯೆ ನಾಗರಾಜರ ಜೀವ ಮರಮರನೆ ಮರುಗಿತು. ಮೋಹನ ತಪ್ಪು ಮಾಡಿದರೆ ಏನಾಯಿತು? ಹೀಗೆ ಹಲವುಸಲ ಅವರಿಗೆ ಅನಿಸಿದೆ. ತಮ್ಮಲ್ಲಿಯೆ ಈ ಪ್ರಶ್ನೆಯನ್ನು ಕೇಳಿಕೊಂಡಿದ್ದಾರೆ. ಆದರೆ ಅದನ್ನು ಬೇಗ ಮರೆತಿದ್ದಾರೆ. ತಮ್ಮ ಛಲವನ್ನೆ ಸಾಧಿಸಿದ್ದಾರೆ. ಅವರು ಎರಡನೆಯ ಮುಕ್ಕಣ್ಣ. ಕೋಪ ಬಂದಿತೆಂದರೆ ಯಾರ ಮಾತೂ ಕೇಳುವಹಾಗಿಲ್ಲ. ಹೀಗಿದ್ದರೂ ಈ ದಿನ ಹೆಂಡತಿ ಅತ್ತುದು, ಅವಳು ಬೆಳಗಿನ ಕೆಲಸಗಳನ್ನು ಬಿಟ್ಟು ಕೋಣೆಗೆ ಬಂದು ಆ ಪ್ರಶ್ನೆ ಕೇಳಿದುದು ಅವರ ಮನಸ್ಸಿನಮೇಲೆ ಎಷ್ಟೊ ಪರಿಣಾಮವನ್ನುಂಟುಮಾಡಿದವು. ಮೋಹನ ಮಾಡಿದ ತಪ್ಪು ಏನು? ಎಂದು ಮತ್ತೊಮ್ಮೆ ಕೇಳಿಕೊಂಡರು.

ಮೇಜಿನ ಮೇಲೆ ಆಳುಮನುಷ್ಯ ಕಾಫಿ ತಂದಿಟ್ಟುಹೋದ. ನಾಗರಾಜರು ಅದನ್ನು ತೆಗೆದುಕೊಂಡರು. ಅಲ್ಲಿಯೆ ಬಿದ್ದ 'ಆಲ್ಬಮ್'ನ್ನೂ ಹಿಡಿದುಕೊಂಡು, ಆರಾಮಕುರ್ಚಿಯಲ್ಲಿ ಒರಗಿಕೊಂಡು, ಕಾಫಿ ಕುಡಿಯುತ್ತ ವಿರಾಮ ತೆಗೆದುಕೊಳ್ಳಹತ್ತಿದರು. ಒಂದೆಡೆಗೆ 'ಆಲ್ಬಮ್ಮ'ನ ಪುಟಗಳನ್ನು ತಿರುವುತ್ತಿದ್ದಾರೆ; ಇನ್ನೊಂದೆಡೆಗೆ ತುಸುತುಸು ಕಾಫಿ ಚೀಪುತ್ತಿದ್ದಾರೆ. ಒಳಗೊಳಗೆ ಮನಸ್ಸು ಪ್ರಶ್ನೆ ಮಾಡುತ್ತಿತ್ತು—'ಮೋಹನ ತಪ್ಪುಮಾಡಿದುದೇನು?'

ಎಂದು. ಕಾಫಿಯ ಉಗಿ ಹಾಗೆಹಾಗೆಯೆ ಮೇಲೆ ಮೇಲೇರಿ ಮಾಯವಾಗುತ್ತಿತ್ತು. ಒಂದೊಂದು ಸಣ್ಣ ಉಗಿಯ ಸುರುಳಿ ಅವರಿಗೆ ಜೀವನದ ಅನೇಕ ಚಿತ್ರಗಳನ್ನು ಚಿತ್ರಿಸುತ್ತಿತ್ತು.

ಮೋಹನ ಕಾಲೇಜ ಕಟ್ಟಡವನ್ನೇರಿದಾಗಿನಿಂದ ತಂದೆಯ ಕೈಬಿಟ್ಟಂತೆ ಆಗಿತ್ತು. ಅವನು ರಾಜಕೀಯ ರಂಗದಲ್ಲಿ ಓಡಾಡಹತ್ತಿದ. ಇದು ತಿಳಿದ ಕೂಡಲೆ ಚಕ್ರವರ್ತಿ ಸರಕಾರದ ಅಭಿಮಾನಿಗಳಾದ ನಾಗರಾಜರು ಮಗನನ್ನು ಬೈಯ್ದು ಪತ್ರಗಳ ಸುರಿಮಳೆ ಮಾಡಿದರು. ಆದರೆ ಆ ಜಡಿಮಳೆ ಮಗನ ಮನಸ್ಸನ್ನು ತೋಯಿಸಲಿಲ್ಲ. ಅವನು ನಿಶ್ಚಲನಾಗಿ ಹಾಗೆಯೆ ಸಾಗಿದ. ಇದು ತಂದೆಯಾದ ತನಗೆ ದೊಡ್ಡ ಅಪಮಾನವೆಂದು ತಿಳಿದುಕೊಂಡರು. ಆ ಹುಡುಗನನ್ನು ಹೇಗಾದರೂ ನುಂಗಬೇಕೆನ್ನುವಷ್ಟರಲ್ಲಿ ಮತ್ತೊಂದು ವರ್ತಮಾನ ಅವರ ಕಿವಿಗೆ ಬಡಿಯಿತು. ಅದು ಹಾರಿಕೆಯ ಸುದ್ದಿಯೆಂದು ಮೊದಲು ಎಣಿಸಿದ್ದರು. ಆದರೆ ಅದು ನಿಜವೆಂದೇ ಅವರಿಗೆ ಮನದಟ್ಟಾಯಿತು. ಯಾವಳೋ ಒಬ್ಬ ಕಾಲೇಜ ಹುಡಿಗೆಯ ಸಂಗಡ ಓಡಾಡುತ್ತಿರುವನೆಂದೂ, ಅವಳನ್ನು ಲಗ್ನವಾಗುವನೆಂದೂ ಅವರಿಗೆ ವಿದಿತವಾಯಿತು. ಕಾಲೇಜಕ್ಕೆ ಹೋದ ಒಂದು ವರ್ಷದಲ್ಲಿಯೆ ಮಗ ಇಷ್ಟು ಪ್ರಬುದ್ಧನಾದುದನ್ನು ಕಂಡು ಅವರು ಕಿಡಿಕಿಡಿಯಾದರು. ಒಂದು ಹೆಣ್ಣನ್ನು ಹುಡುಕಿ ಅವನಿಗೆ ಗಂಟುಹಾಕಬೇಕೆಂದೂ ಇಚ್ಛಿಸಿದರು. ಆದರೆ ಮೋಹನ ತನಗೆ ಲಗ್ನವಾಗುವ ಇಚ್ಛೆ ಇಲ್ಲವೆಂಬ ನೆವವೊಡ್ಡಿ ಮದುವೆಯನ್ನು ನಿರಾಕರಿಸಿದ. ಈ ವಿಷ ಗುಳಿಗೆಯನ್ನು ಹೊಟ್ಟೆಯಲ್ಲಿ ನುಂಗದೆ, ಕಂಠದಲ್ಲಿಯೆ ಇಟ್ಟುಕೊಂಡು ವಿಷಕಂಠರಾಗಿದ್ದರು.

ಹಲವು ದಿನಗಳ ತರುವಾಯ ನಾಗರಾಜರಿಗೆ ಮತ್ತೊಂದು ವಾರ್ತೆ ಗೊತ್ತಾಯಿತು. ಮೋಹನನ ಸಂಗಡ ಆಗದ ಹಲವು ಕುಹಕಿಗಳು ಒಂದು ಗುಪ್ತ-ಪತ್ರವನ್ನು 'ರಜಿಸ್ಟರ್' ಮಾಡಿ ಕಳಿಸಿದ್ದರು. ಎಲ್ಲ ಗುಟ್ಟುರಟ್ಟಾಗಿತ್ತು. ಮೊದಲೆ ಸಂಶಯವನ್ನು ತೆಗೆದುಕೊಂಡ ನಾಗರಾಜರು ನೂರ್ಮಡಿಯಾಗಿ ಕುಪಿತರಾದರು. ಅಡಿಯಿಂದ ಮುಡಿಯುವರೆಗೂ ಅವರ ದೇಹ ನಡುಗಿತು; ಇಷ್ಟಾದಮೇಲೆ ತಮ್ಮ ಜೀವ ಈ ಜಗತ್ತಿನಲ್ಲಿರುವುದೂ ತರವಲ್ಲವೆಂದು ಬಯಸಿದರು. ದೇವರಿಗೆ ತಮ್ಮನ್ನು ಬೇಗ ಕರೆದುಕೊಂಡು ಹೋಗಲು ಮೊರೆಯಿಟ್ಟರು. ಆ ಗುಪ್ತ ಪತ್ರವನ್ನು ಓದಿಓದುತ್ತಲೆ, ಮನಸ್ಸು ಕಲ್ಲೋಲವಾಗಿ

ಕಣ್ಣು ಮುಚ್ಚಿದರು. ಅದು ಅವರ ವಂಶದ ಮಾನಹಾನಿಯ ಪ್ರಶ್ನೆಯಾಗಿತ್ತು. ಪ್ರೀತಿ ಮರವಾಗಿ ಬೆಳೆದಮೇಲೆ ಫಲ ಬಿಡದೆ ಇರುವುದು ಅಶಕ್ಯವೆ? ತಮ್ಮ ಮಗ ಮೋಹನ, ಈ ರೀತಿ ಸ್ವೇಚ್ಛಾಚಾರಿಯಾಗಿ ವ್ಯಭಿಚಾರಿಯಾಗಿ ಬಾಳು ಹಾಳುಮಾಡಿಕೊಳ್ಳುವನೆಂದು ಅವರು ಕನಸುಮನಸಿನಲ್ಲಿಯೂ ನೆನಸಿರಲಿಲ್ಲ! ತಮ್ಮ ಮಗ ಮದುವೆಯ ಮುನ್ನ ಹೆಂಗಸಿನ ಸಂಗಡ ಈ ರೀತಿ ಇರುವ ದೆಂದರೆ..........?

ಹೊಟ್ಟೆಯಲ್ಲಿರುವ ಸಿಟ್ಟನ್ನು ರಟ್ಟೆಯ ಮೂಲಕ ಹೊರಬೀಳಿಸಬೇಕೆಂದು ನಾಗರಾಜರು ಯೋಚಿಸಿದರು. ಅವನ ಹತ್ತಿರವೇ ಹೋಗಿ ಎಲ್ಲವನ್ನು ತಿಳಿ ಹೇಳಬೇಕೆಂದರು. ಆದರೆ ಮೋಹನ ಎಲ್ಲಿ? ಆಗಸ್ಟ ೧೯೪೨ರ ಚಳವಳಿ 'ಹಾಹಾ' ಎನ್ನುವುದರೊಳಗಾಗಿ ಭಾರತ ತುಂಬ ಹಬ್ಬಿತು. ಕಾಲೇಜ, ಶಾಲೆ ಗಳ ವಿದ್ಯಾರ್ಥಿಗಳಿಗಂತೂ ಒಂದು ಹೊಸ ಮಾಯಾಜಾಲವನ್ನೆ ಬೀಸಿದಂತಾ ಯಿತು. ಹಿಮಾಲಯದಷ್ಟು ಅವರ ಉತ್ಸಾಹ ಉಕ್ಕೇರಿತು. ಈ ಅನಂತ ಮಾಹಾಪೂರದಲ್ಲಿ ಮೋಹನ ಧುಮುಕಿಬಿಟ್ಟಿದ್ದ. ಅದರ ಸೆಳವಿನಲ್ಲಿ ಸಿಕ್ಕು ಉಳಿದ ಲೋಕವನ್ನೆ ಮರೆತ. ತನ್ನ ತಂದೆಯವರು ಇದಕ್ಕೆ ಬೆಂಬಲ ಕೊಡ ಲಾರರೆಂದು ಅವನಿಗೆ ಅನಿಸಿತ್ತು. ಅದರಿಂದ ಅವರಿಂದ ದೂರ, ಬಹುದೂರ ನಾಗಿ ಹೋಗಿದ್ದ.

ನಾಗರಾಜರು ಚೌಕಶಿ ಮಾಡಿದರು. ಅಲ್ಲಲ್ಲಿ ಹುಡುಕಿದರು. ಅವರಿಗೆ ಎಲ್ಲಿರುವನೆಂಬುದು ಬೇಗ ಗೊತ್ತಾಗಲಿಲ್ಲ. ಮೋಹನನದು ಸೆರೆಮನೆಯ ವಾಸವಾಗಿತ್ತು! ಮೂರನೆಯ ವರ್ಗದ ಕೈದಿಯಾಗಿ ಕಠಿಣ ಶಿಕ್ಷೆಯನ್ನು ಅನು ಭವಿಸುತ್ತಿದ್ದ! ಇದನ್ನೆಲ್ಲ ತಿಳಿದು, ಉಶ್ಶೆಂದು ಅಂಬಾನಿವಾಸಕ್ಕೆ ತಿರುಗಿ ಬಂದು, ಆರಾಮ ಕುರ್ಚಿಯಲ್ಲಿ ಬಿದ್ದುಕೊಂಡಾಗ............

ಅಹುದು, ಅವೇ ಚಿತ್ರಗಳು! ಐದು ವರ್ಷದ ಮೇಲೂ ಇನ್ನೂ ಅಚ್ಚಳಿಯದಂತೆ ಇವೆ! 'ಅಲ್ಬಮ್ಮಿ'ನಲ್ಲಿ ಇನ್ನು ಹಾಗೆಯೆ ಸುಖವಾಗಿ ಕಾಲ ಕಳೆದಿವೆ. ಹಿಂದಕ್ಕೆ ಆ ದಿನ ದಣಿದು ಆರಾಮ ಕುರ್ಚಿಯಲ್ಲಿ ಕುಳಿತಾಗ ಅಂಚೆಯವನು ಅವುಗಳನ್ನು ತಂದು ಕೊಟ್ಟಿದ್ದನು. ಅವು ಏನು ವಿರಾಮ ಕೊಡಬೇಕು! 'ಕಪ್ಪಿ'ನ ಅರ್ಧ ಇರುವ ಕಾಫಿ ಆರಿ ಅಂಗಾರವಾಗಿತ್ತು. ನಾಗ

ರಾಜರ ಲಕ್ಷ್ಯ ಅತ್ತ ಕಡೆ ಇರಲಿಲ್ಲ. ಎರಡೂ ಕಣ್ಣುಗಳು ವಿಶಾಲವಾಗಿ ಅರಳಿ 'ಆಲ್ಬಮ್ಮಿ'ನಲ್ಲಿರುವ ಭಾವಚಿತ್ರದ ಕಡೆಗೆ ನೋಡುತ್ತಿದ್ದವು.

ಮೋಹನ ಮತ್ತು ತೇಜಸ್ವಿನಿ! ಮೋಹನ ಸಂಪೂರ್ಣವಾಗಿ ಖಾದಿ ವೇಷ ಹಾಕಿಕೊಂಡಿದ್ದಾನೆ. ಅವನ ಮುಖದಲ್ಲಿ ಅಪೂರ್ವವಾದ ತೇಜಸ್ಸು; ತಿದ್ದಿ ತೀಡಿ ಮಾಡಿದ ದೇಹ ಅವನದು. ಅವನ ಹೆಗಲಮೇಲೆ ಕೈಯಿಟ್ಟು ನಿಂತಿರುವವಳು ತೇಜಸ್ವಿನಿ. ಅಪರಂಪಾರವಾಗಿ ಪ್ರೀತಿಸಬೇಕೆಂಬ ಬೆಳಕು ಅವಳ ಕಣ್ಣುಗಳಲ್ಲಿ ಹೊಳೆಯುತ್ತಿತ್ತು. ಬಾಳುವೆಯ ಕುಲಿಮೆಯಲ್ಲಿ ಕಿಡಿಯಾಗಿ ಸಿಡಿದರೂ ಕೂಡಿಯೆ ಜೀವಿಸುವೆವೆಂಬ ಸ್ನೇಹ ಸಮ್ಮಿಲನವಿತ್ತು.

ಐದು ವರ್ಷಗಳ ಮೇಲೆ, ಸ್ವಾತಂತ್ರ್ಯದ ಸುದಿನ, ನಾಗರಾಜರು ವಿಚಾರಿಸಿದರು. ಯಾರನ್ನು ಚಳವಳಿಖೋರರೆಂದು ಹೀಯಾಳಿಸಿದ್ದರೊ, ಅವರೇ ಎಲ್ಲರ ಬಂಧನದ ಬೇಡಿಗಳನ್ನು ಕಡಿದೊಗೆದಿದ್ದರು. ಅವರ ಮೋಹನ ಹಿರಿಯರ ಮಾತು ಮೀರಿದರೂ, ಶೂರ ಸೈನಿಕನಾಗಿ ವರ್ತಿಸಿದ; ವೀರಮರಣವನ್ನು ಪಡೆದ. ಅವನದೇನು ತಪ್ಪು? ಅವಳದೇನು ತಪ್ಪು? ಅವಳು ಆ ಮರಣದ ದುಃಖವನ್ನೂ ಸಹಿಸಿಕೊಂಡು ಇರುವಳಲ್ಲ! ಮೋಹನನ ಸಲುವಾಗಿ ತನ್ನ ಸರ್ವಸ್ವವನ್ನೆ ಧಾರೆಯೆರೆದ ಹೆಂಗರುಳಿಗೆ ತ್ರಾಸುಕೊಟ್ಟವರು ಯಾರು? ತಾನು ಪಾಪಿ ಎಂದೆನಿಸಿತು.

ಪಾಪಿ ಎಂಬ ಮಾತು ಕೋಣೆಯ ಗೋಡೆಗಳೆಲ್ಲ ಒದರಿದಂತಾದವು. ಒಮ್ಮೆಲೆ ಹೃದಯದಲ್ಲಿ ಪರಿವರ್ತನೆಯಾದಂತಾಯಿತು. ಅಂಬೂತಾಯಿ ಬಯಸಿದಂತೆ ತಾನೂ 'ಸೊಸಿ, ಮೊಮ್ಮಗ' ಎಂದು ಆಶೆಪಟ್ಟರು. ಜಡಿಮಳೆ ಹೊಡೆದ ಕೂಡಲೆ ಕೊಳಚೆಯಲ್ಲ ತೇರಿಹೋಗುವಂತೆ, ಅವರ ಪಾವನ ಗಂಗೆಯು ಪಾಪವನ್ನು ತೊಳೆದಿತ್ತು.

ಕೋಟನ್ನು ಹಾಕಿಕೊಂಡರು; ರುಮಾಲನ್ನು ಸುತ್ತಿದರು; ತಮ್ಮ ಆನುಗೋಲನ್ನು ತೆಗೆದುಕೊಂಡರು. ಸಹಜವಾಗಿ ಕಿಸೆಯಲ್ಲಿ ಕೈಹಾಕಿದಾಗ ಬೆಳಗಿನಲ್ಲಿ ತಾವು ಆರಿಸಿಕೊಂಡ ಹೂವು ಸಿಕ್ಕಿತು. ಅದು ಈಗಾಗಲೆ ಬಾಡಿಹೋಗಿತ್ತು. ಬೇಗ ಬಾಡಿಹೋದ ಆ ಹೂ ನೋಡಿದ ಕೂಡಲೆ ತೇಜಸ್ವಿನಿ ನೆನಪಾದಳು.

ಆಳುಮನುಷ್ಯನಿಗೆ ತಮ್ಮ ಸಾಮಾನುಗಳನ್ನು ಕಟ್ಟಲು ಹೇಳುತ್ತ ಒಳಗಿನ ಮನೆಗೆ ನಾಗರಾಜರು ಅಡಿಯಿಟ್ಟರು.

ಆಗಸ್ಟ ೧೫ರ ಬೆಳಗು !

"ಬರುವದೇನುಂಟಮ್ಮ ಬರುವ ಕಾಲಕೆ ಬಹುದು
ಬರುವುದರ ಕಣ್ಣನ್ನೆ ನೀನೆ ಕಾಣೊ."

ಎಂಬ 'ಮಧುರಚನ್ನ'ರ ಆಶಾವಾದದ ವಾಕ್ಯಗಳನ್ನು ತೇಜಸ್ವಿನಿ ನೆನೆಸಿದಳು. ಆ ವಾಕ್ಯಗಳನ್ನು ಮೋಹನ ಮೇಲಿಂದ ಮೇಲೆ ಹೇಳುತ್ತಿದ್ದ. ಇಂಥ ಆಶಾವಾದದ ಮಾತುಗಳನ್ನು ನೆನೆಸಿಯೆ ಅವಳು ಈ ಐದು ವರ್ಷಗಳವರೆಗೆ ಜೀವ ಹಿಡಿದಿದ್ದಳು. ಇಲ್ಲವಾದರೆ ಯಾವ ಭಾವಿಯ ಪಾಲಾಗುತ್ತಿದ್ದಳೊ! ಈ ಮಾತನ್ನು ಸ್ಮರಿಸುತ್ತಲೆ ತೋಟದಲ್ಲಿಯ ಹಲವು ಹೂವುಗಳನ್ನು ಹರಿದಳು.

ಹೂವುಗಳನ್ನು ಕೈಯಲ್ಲಿ ಹಿಡಿದುಕೊಂಡು, ತನ್ನ ಕೋಣೆಯನ್ನು ಪ್ರವೇಶಿಸಿದಕೂಡಲೆ ಹೊರಗೆ ಜಯಜಯಕಾರದ ಧ್ವನಿ ಕೇಳಿಸಿತು. ಸಹಜವಾದ ಕುತೂಹಲದಿಂದ ಕಿಟಕಿಯೊಳಗಿಂದ ನೋಡಿದಳು. ಸ್ವಯಂಸೇವಿಕೆಯರ ಗುಂಪೊಂದು ಮೆರವಣಿಗೆಯಲ್ಲಿ ಹೊರಟಿತ್ತು.

"ಗಾಂಧೀ ಮೈದಾನಕ್ಕೆ ನೀನೂ ಬರುವದಿಲ್ಲವೆ?" ಗೆಳತಿಯಾದ ಸ್ವಯಂಸೇವಿಕೆಯೊಬ್ಬಳು ಕಿಟಕಿಯ ಸಮೀಪಕ್ಕೆ ಬಂದು ಕೇಳಿದಳು.

ತೇಜಸ್ವಿನಿಗೆ, ಏನು ಉತ್ತರ ಹೇಳಬೇಕೆಂಬುದು ಗೊತ್ತಾಗಲಿಲ್ಲ. ಅವಳಿಗೆ ಸ್ವಾತಂತ್ರ್ಯದ ಉತ್ಸಾಹವಿದ್ದರೂ, ಮನಸ್ಸು ಏಕೊ ಹೊರಬೀಳಲು ಬಯಸುತ್ತಿರಲಿಲ್ಲ. "ನೀನು ಮುಂದೆ ನಡೆ, ಈಗ ಬರುತ್ತೇನೆ" ಎಂದಿಷ್ಟೆ ಹೇಳಿದಳು.

"ಬೇಗ ಬರಬೇಕು. ಸ್ವಾತಂತ್ರ್ಯ ತಂದುಕೊಟ್ಟ ನಿಮ್ಮಂಥ ಮಹಿಳೆಯರೆ ಬರದಿದ್ದರೆ?" ಎಂದು ಕೊಂಕುನುಡಿಯೊಂದನ್ನು ಗೋಣು ಹೊರಳಿಸುತ್ತ ಆಡಿದಳು.

'ಸ್ವಾತಂತ್ರ್ಯ? ನಾನೆ?' ಹೀಗೆ ಅನ್ನುವ ಮುಂದೆ ಅವಳ ಮುಖಚರ್ಯೆ ಬದಲಾಯಿತು; ನಯನಗಳು ಶೂನ್ಯದೃಷ್ಟಿಯವಾದವು.

‘ ಹೀಗೇಕೆ ನೋಡುತ್ತಿ ಹುಚ್ಚಿಯ ಹಾಗೆ? ಅಲ್ಲ .. ........ ’ ಅವಳ ಕೈಯಲ್ಲಿಯ ಹೂಗಳನ್ನು ನೋಡಿ ‘ ಎಷ್ಟು ಛಂದ ಅವೆ ಇವು! ನನಗ ತಾರಲ್ಲಾ ’ ಎಂದು ಕೇಳಿದಳು. ತೇಜಸ್ವಿನಿಯ ಉತ್ತರದ ದಾರಿಯನ್ನು ನೋಡದೆ, ಹೂವಿನಾಶೆ ತುಂಬಿಕೊಂಡ ಅವಳು ತೇಜಸ್ವಿನಿಯ ಕೈಯಲ್ಲಿಯ ಹೂಗಳನ್ನು ಕಿಟಕಿಯೊಳಗೆ ಕೈಹಾಕಿ ತೆಗೆದುಕೊಂಡವಳೆ ಗಹಗಹಿಸಿ ನಕ್ಕಳು. ತನ್ನ ತುಂಬುಗಣ್ಣುಗಳನ್ನು ಹೊರಹೊರಳಿಸಿ ನೋಡುತ್ತ ಮೆರವಣಿಗೆಯ ಹಿಂದೆ ಸಾಗಿದಳು.

ಅವಳ ಆ ನಗು, ಆ ಹುಡುಗಾಟವು, ಯೌವನಮದದಿಂದ ತುಂಬಿದ ಆ ಆಶೆಗಣ್ಣುಗಳು ತೇಜಸ್ವಿನಿಯನ್ನು ಮುಗ್ಧಳನ್ನಾಗಿ ಮಾಡಿದವು. ತಾನೂ ಮದುವೆಯಾಗದೆ ಹೋಗಿದ್ದರೆ........? ಕಾಲೇಜಿನಲ್ಲಿ ಹಾಗೆಯೆ ಕಲಿಯುತ್ತ ಹೋಗಿದ್ದರೆ........? ತನ್ನ ಕಾಲೇಜ ಗೆಳತಿಯರಂತೆಯೆ ಕಾಲಕಳೆಯಬಹು ದಿತ್ತಲ್ಲವೆ ಎಂದೆನಿಸಿತವಳಿಗೆ.

ತೇಜಸ್ವಿನಿ ಕಾಲೇಜಿನಲ್ಲಿ ಕಲಿತದ್ದು ಒಂದೇ ಒಂದು ವರ್ಷ. ಅದೇ ವರ್ಷ ಕಾಲೇಜ ಜೀವನದ ಎಲ್ಲ ಸುಖವನ್ನನುಭವಿಸಿದಳು. ಆ ದಿವಸಗಳೆಂದರೆ ಅವಳಿಗೆ ಅತ್ಯಂತ ಸುಖದ ನೆನಪಾಗಿ ಮೈನವಿರೇಳುವುದು. ಘೋರ ನರಕ ಜೀವನದ ಒಂದು ತಟಕು ಹನಿಯಾದರೂ ಮೈಗೆ ತಟಕುತ್ತಿರಲಿಲ್ಲ. ನೇಸರನ ಭಂಗಾರದ ಕಿರಣವನ್ನು ಕುಕ್ಕಿ ಸ್ವಚ್ಛಂದವಾಗಿ ಹಾರುವ ಹಕ್ಕಿಗಳಿಗಿಂತೂ ಅವಳ ಮೈ ಹಗುರಾಗಿತ್ತು. ಅಷ್ಟು ಸ್ವತಂತ್ರ! ಅಷ್ಟು ಆನಂದ! ಅದರಲ್ಲಿಯೆ ಯೌವನದ ಸ್ವರ್ಗಸೋಪಾನಗಳು. ಅವುಗಳನ್ನು ಏರುತ್ತ ಹೋದಂತೆ ಆಕಾಶ ಚಿಕ್ಕೆಗಳ ಕೈಗೆ ಸಿಕ್ಕವೇನೋ ಎಂದೆನಿಸುತ್ತಿತ್ತು ಅವಳಿಗೆ. ಮೋಹನನ ಸಹ ವಾಸ ಅವಳಿಗೆ ಅಷ್ಟು ಸ್ಫೂರ್ತಿದಾಯಕವಾಗಿತ್ತು.

ಮೋಹನ ಬಿ. ಎ. ಪರೀಕ್ಷೆಗೆ ಅಭ್ಯಾಸ ಮಾಡುತ್ತಿದ್ದ. ಅವನಿಗೆ ಅಭ್ಯಾಸಕ್ಕಿಂತಲೂ ಇತ್ತಿತ್ತಲಾಗಿ ರಾಜಕೀಯ ರಂಗದಲ್ಲಿ ವಿಶೇಷವಾಗಿ ಆಸಕ್ತಿ ಯಿತ್ತು. ವಸತಿಗೃಹದ ಕೋಣೆಯಲ್ಲಿರುವುದೇ ಕ್ವಚಿತ್ತಾಗಿತ್ತು. ಯಾವ ಗ್ರಹ ಅವನಿಗೆ ಅಂಟಿಕೊಂಡಿತ್ತೊ! ಯಾವಾಗಲೂ ಸಂಘ ಸಂಸ್ಥೆಗಳಿಗೆ ಭೆಟ್ಟಿ ಕೊಡುತ್ತ ಅಲ್ಲಲ್ಲಿಭಾಷಣಮಾಡುತ್ತ ತಿರುಗುತ್ತಿದ್ದ.

ಕಾಲೇಜಿಗೆ ಹೊಸದಾಗಿ ಹೋದಾಗ ತೇಜಸ್ವಿನಿಗೆ ಅವನ ಭಾಷಣಗಳನ್ನು ಅಣಕಿಸುವುದು ಚಟವಾಗಿತ್ತು. ತನ್ನ ಗೆಳತಿಯರ ಜೊತೆಗೆ ಹೊರಟಾಗ, ಮೋಹನನು ಎದುರಿಗೆ ಬರುವದನ್ನು ನೋಡಿದಕೂಡಲೆ ತೇಜಸ್ವಿನಿ ಅಣಕು ವಾಡುಗಳನ್ನು ಪ್ರಾರಂಭಿಸುತ್ತಿದ್ದಳು. ಮೋಹನ ಸ್ವಲ್ಪ ಮರೆಯಾದ ಕೂಡಲೆ ಎಲ್ಲರೂ ಕೂಡಿ ಬಿದ್ದು ಬಿದ್ದು ನಗುತ್ತಿದ್ದರು.

ಮೋಹನನಿಗೆ ಇದೇಕೊ ಬಹಳ ಪೇಚಿಗಿಟ್ಟುಕೊಂಡಿತು. ಒಂದುಸಲ ತೇಜಸ್ವಿನಿ ಒಬ್ಬಳೇ ಹೊರಟಾಗ, ಮೋಹನ ಅವಳನ್ನು ಅಡ್ಡಗಟ್ಟಿದ. ಅವಳ ಚೇಷ್ಟೆಯ ಇಂಗಿತವನ್ನು ತಿಳಿಯಲೆತ್ನಿಸಿದ. ತೇಜಸ್ವಿನಿ ಗಾಬರಿಯಾಗಿದ್ದಳು, ಮೈ ಬೆವರೊಡೆದಿತ್ತು. ಕೊಂಚ ವೇಳೆಯನಂತರ ಚೇತರಿಸಿಕೊಂಡು ಮೆಲು ನಗೆ ನಕ್ಕುಬಿಟ್ಟಳು. ನಗುವುದು ಅವಳಿಗೊಂದು ಚಟವಾಗಿತ್ತು. ಅಮೃತ ಗಲ್ಲಗಳಿಂದ ನಿರ್ಮಲವಾಗಿ ನಗುವ ಎಳಗೂಸಿನಂತೆ ಅವಳು ಯಾವುದಾದರೂ ಕಠಿಣ ಪ್ರಸಂಗ ಬಂದಿತೆಂದರೆ ನಕ್ಕುಬಿಡುತ್ತಿದ್ದಳು. ಆ ನಗು ಮೋಹನನ ಕೋಪಾಟೋಪವನ್ನು ಜರ್ರನೆ ಕೆಳಗಿಳಿಸಿತು.

ತೇಜಸ್ವಿನಿಯ ಪರಿಚಯವಾದಾಗಿನಿಂದಲೂ ಮೋಹನನ ದಾರಿ ಸ್ವಲ್ಪ ಬದಲಾಗತೊಡಗಿತು. ಸಂಜೆಯಲ್ಲಿ ತೇಜಸ್ವಿನಿಯ ದಾರಿಯನ್ನೆ ಹಿಡಿದು ಹೋಗುತ್ತಿದ್ದ. ಮೊದಮೊದಲು ಅವಳ ಮುಖ ನೋಡಿದರೆ ಸಾಕು—ಅಷ್ಟೆ ಸಂತೋಷ! ಆಮೇಲೆ ಅವಳನ್ನು ಮಾತನಾಡಿಸಿದರೆ ಮನಸ್ಸಿಗೆ ಹಗುರೆನಿಸುತ್ತಿತ್ತು! ಅವಳು ತಾನಾಗಿಯೆ ಕಾಲೇಜ ವಿದ್ಯಾರ್ಥಿನಿಯರ ವೈಶಿಷ್ಟ್ಯದಂತೆ ಚಲಚಿತ್ರಕ್ಕೆ ಹೋಗೋಣವೇನೆಂದು ಕೇಳಿದರೆ.........ಮೋಹನನಿಗೆ ಸಗ್ಗಸೊಗ್ಗ ಸಿಕ್ಕಂತಾಗುತ್ತಿತ್ತು.

ಎರಡನೆಯ ಟರ್ಮ ಬಂದು ಎಲ್ಲರೂ ತಮ್ಮ ತಮ್ಮ ಕೋಣೆಗಳಲ್ಲಿ ಅಭ್ಯಾಸದಲ್ಲಿ ಮಗ್ನರಾಗಿ ಕುಳಿತಿದ್ದರೂ, ತಂದೆಯವರಿಂದ ಎಚ್ಚರಿಕೆಯ ಪತ್ರ ಬರುತ್ತಿದ್ದರೂ, ಮೋಹನನಿಗೆ ಅದರ ಪರಿವೇ ಇರಲಿಲ್ಲ. ತನ್ನ ವಸತಿಗೃಹದ ಗೆಳೆಯರಿಗೆ ರಾಜಕೀಯ ಗುಪ್ತಕಾರ್ಯಕ್ರಮದ ಕೆಲಸದ ಸುಳ್ಳುನೆವ ಹೇಳಿ ತನ್ನ ಕೋಣೆ ಬಿಟ್ಟುಹೋಗುತ್ತಿದ್ದ. ಅಲ್ಲಿ ತೇಜಸ್ವಿನಿಯ ಜೊತೆಗೆ ಅಭ್ಯಾಸ ಮಾಡುತ್ತಿದ್ದ! ಅವನು ಕೋಣೆಗೆ ಬರುತ್ತಿರುವುದನ್ನು ನೋಡಿದಕೂಡಲೆ

ಅವನ ಕೇವಲ ಮಿತ್ರರು 'ಗುಪ್ತಕಾರ್ಯದ ಫಲ ಹೇಗೆ ಇದೆ?' ಎಂದು ಹಾಸ್ಯಮಾಡಿ ಕೇಳುತ್ತಿದ್ದರು. ಇವೆಲ್ಲ ಸುದ್ದಿಗಳನ್ನು ತೇಜಸ್ವಿನಿಯ ಮುಂದೆ ಹೇಳುತ್ತಿದ್ದನು. ಇಬ್ಬರೂ ಕೂಡಿ ನಕ್ಕುಬಿಡುತ್ತಿದ್ದರು.

ತೇಜಸ್ವಿನಿ ನಕ್ಕಳು, ಕಾಲೇಜ ಜೀವನದ ಪ್ರೇಮಮಯ ಚಿತ್ರವನ್ನು ನೆನೆಸಿ ನಕ್ಕಳು. ಸಮೀಪದಲ್ಲಿ ಯಾರು ಇರುವರೆಂಬ ಅರಿವು ಇಲ್ಲದಲೆ ನಕ್ಕಳು.

ಚಿಕ್ಕಮಗು ಅವಳ ಬೆನ್ನ ಹಿಂದೆ ನಿಂತು, ಸೀರೆಯ ಸೆರಗನ್ನು ಹಿಡಿದು ಇವಳನ್ನು ಕೂಗಿಕೊಳ್ಳುತ್ತಿತ್ತು. ಹೊರಗೆ ಬಾಗಿಲದ ಆಚೆ ಯಾವುದೋ ಕೆಲಸದಲ್ಲಿ ತೊಡಗಿ ತಂದೆಯವರು 'ತೇಜಾ ತೇಜಾ........' ಎಂದು ಒದರುತ್ತಿದ್ದರು. ತೇಜಸ್ವಿನಿ ಓಗೊಡದಾದಕೂಡಲೆ ತಾವೇ ಕೋಣೆಯವರೆಗೂ ಬಂದು, ಅವಳು ನಗುತ್ತಿರುವುದನ್ನು ನೋಡಿ 'ಏನು ತೇಜಾ, ಬಹಳ ಖುಷಿಯಲ್ಲಿದ್ದಂತೆ ಕಾಣುತ್ತದೆ. ಈವೊತ್ತು ಹೊರಗೆ ತಿರುಗಾಡಿ ಬರೋಣ. ಬೇಗ ತಯಾರಾಗು' ಎಂದು ಹೇಳಿಹೋದರು.

ತೇಜಸ್ವಿನಿ ತಂದೆಯೆಂದು ಹೇಳುತ್ತಿರುವುದು ನಿಜವಾದ ತಂದೆಯಲ್ಲ. ಅವಳ ತಂದೆತಾಯಿ ಅವಳು ಚಿಕ್ಕವಳಿದ್ದಾಗಲೇ ಇಹಲೋಕವಾಸದಿಂದ ತೆರಳಿದರು. ತೇಜಸ್ವಿನಿ ಅನಾಥೆಯಾಗಿ ಕಾಕಾನ ಹತ್ತಿರ ಬೆಳೆದಳು. ಕಾಕಾ ಅವರೂ ತಮ್ಮ ಮಕ್ಕಳಂತೆಯೇ ಅವಳನ್ನು ಪ್ರೀತಿಸುತ್ತಿದ್ದರು. ಅಂತೆಯೆ ಅವಳು ಅನ್ಯಜಾತಿಯವನನ್ನು, ಚಳುವಳಿಯಲ್ಲಿದ್ದವನನ್ನು ಪ್ರೀತಿಸಿದರೂ, ಅವಳ ಸ್ವತಂತ್ರವಾದ ಪ್ರೇಮದ ಆಶೆಗೆ ವಿಶೇಷವಾಗಿ ಅಡ್ಡಬಂದಿರಲಿಲ್ಲ. ಪ್ರೀತಿಯಿಂದ ಆ ದಿನ ಸ್ವಾತಂತ್ರ್ಯ ದಿನೋತ್ಸವವನ್ನು ತೇಜಸ್ವಿನಿಗೂ ತೋರಿಸಲು ಆತುರರಾಗಿ ಅವಳನ್ನು ಕರೆದರು.

ಚಿಕ್ಕ ಮಗು ರವಿಗೂ ಹೊರಗೆ ಹೋಗುವುದು ಬೇಕಾಗಿತ್ತು. ಆದ್ದರಿಂದ ಅವ್ವನ ಹತ್ತಿರ ಬಂದು ಹಟಮಾಡುತ್ತಿದ್ದ. ತೇಜಸ್ವಿನಿ ಅವನ ಕಡೆ ಲಕ್ಷಗೊಟ್ಟಾಗ ರವಿಯು ಯಾವುದೊ ಒಂದು ಪುಸ್ತಕವನ್ನು ಹರಿಯುತ್ತಿದ್ದ. ತೇಜಸ್ವಿನಿ ಆ ಪುಸ್ತಕ ಕಸಿದುಕೊಂಡು ನೋಡಿದಳು. ಅದು 'ಸಖೀ ಗೀತ' ವಾಗಿತ್ತು. ರವಿ ಮತ್ತಿಷ್ಟು ಅಳತೊಡಗಿದ. ಆದರೆ ತಾಯಿ ಆ ಪುಸ್ತಕ

ಕೊಡುವಹಾಗಿರಲಿಲ್ಲ. ಅವನ ಗಲ್ಲಗಳ ಮೇಲೆ ಮುದ್ದುಗಳ ಸುರಿಮಳೆಮಾಡಿ ಅವನನ್ನು ಸಮಾಧಾನ ಮಾಡಲು ಯತ್ನಿಸಿದಳು.

'ಸಖೀ ಗೀತ' ಪುಸ್ತಕ ಮೋಹನ ಜೇಲಿನಿಂದ ಪಾರಾಗಿ ಗುಪ್ತವಾಗಿ ಲಗ್ನಕ್ಕೆ ಬಂದಾಗ ಕೊಟ್ಟ ಕಾಣಿಕೆಯ ಪುಸ್ತಕವಾಗಿತ್ತು. ಅವಳು ಅದನ್ನು ಬಹಳ ಜೋಕೆಯಿಂದ ಕಾದು ಇಟ್ಟಿದ್ದಳು. ತೇಜಸ್ವಿನಿ ಅಸಹಾಯಳಾಗಿದ್ದಳು. ಯಾರಮೇಲೆ ಸಂಪೂರ್ಣವಾಗಿ ತನ್ನ ಭಾರವನ್ನು ಒಗೆದಿದ್ದಳೊ, ಅವನೆ ಅವ ಳಿಂದ ದೂರವಾಗಿದ್ದ. ರಾಜಕೀಯ ಚಳವಳಿಯಲ್ಲಿ ಸೇರಿ, ಅವಳ ಕಣ್ಣು ಗಳಿಗೆ ಹಬ್ಬವನ್ನುಂಟುಮಾಡದಾಗಿದ್ದ. ಜನರೆಲ್ಲ ಛೀ, ಥೂ ಎನ್ನುವಹಾಗಿತ್ತು! ಮನೆಯಲ್ಲಿ ಸ್ವತಃ ಕಕ್ಕನೇ ಅವಳನ್ನು ದುರುದುರು ನೋಡಿ ಮನೆಬಿಟ್ಟು ಹೊರಗೆ ಹಾಕಲು ಕುಳಿತಿದ್ದ. ವಂಶಕ್ಕೆ ಎತಂಹ ಕಲಂಕ ತಟ್ಟಿತ್ತು! ಕಲಂಕ ತಟ್ಟಿದ ಚಂದ್ರನು ಸುಂದರನು! ಆದರೆ ಹೆಣ್ಣುಜಾತಿಯದು ಹಾಗಿಲ್ಲ. ಮದುವೆ ಯಾಗದ ಮುನ್ನ ಗರ್ಭಧಾರಣ ಮಾಡುವದೆಂದರೆ..........? ಆಗ ಮೋಹನ ಸೆರೆಮನೆಯಲ್ಲಿ ಸಿಕ್ಕಿದ್ದರೂ, ರಾಜಕಾರಣವನ್ನು ಬದಿಗಿಟ್ಟು, ತನ್ನ ಪ್ರೇಯ್ದ ಸಿಯ ಮಾನವನ್ನು ಉಳಿಸುವುದರ ಸಲುವಾಗಿ ಗುಪ್ತವಾಗಿ ಓಡಿಬಂದು ಪಾಣಿ ಗ್ರಹಣಕ್ಕೆ ಒಪ್ಪಿಕೊಂಡ. ಎಲ್ಲಿಯೊ ದೂರ ಗುಡ್ಡದಲ್ಲಿಯ ದೇವಾಲಯದಲ್ಲಿ ಒಂದು ದಿನದ ಮದುವೆಯ ಸಮಾರಂಭ(?)ವನ್ನು ಮುಗಿಸಿಕೊಂಡು ಮತ್ತೆ ಅಗಲುವಾಗ, ಮೋಹನ 'ಸಖೀಗೀತ' ಪುಸ್ತಕವನ್ನು ಕೊಟ್ಟು 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು?' ಎಂದು ಹೇಳಿಹೋಗಿದ್ದ. ಆ ಮಾತನ್ನು ತೇಜಸ್ವಿನಿ ಯಾವಾಗಲೂ ನೆನೆಸುವಳು.

ಈಗ ರವಿಯೆ ಮೋಹನನ ರೂಪದಲ್ಲಿ ಇದ್ದ. ಅವನಿಗೆ ಮುದು ಕೊಡುವಾಗ ಅವಳಿಗೆ ಯಾವಯಾವವೊ ಚಿತ್ರಗಳು ನೆನಪಾಗುವವು. ಒಮ್ಮೆ ಸುಖ, ಒಮ್ಮೆ ದುಃಖ. ಅವಳು ಯಾವಾಗಲೂ ಇಂತಹ ಬಾಳ ಹೆಮ್ಮರದ್ದ ನೆರಳು ಬೆಳಕಿನಲ್ಲಿ ಆಟವಾಡುತ್ತಲೆ ವೇಳೆಗಳೆದಿದ್ದಾಳೆ.

ಹಾಗೆ ಏನನ್ನೊ ನೆನಸುತ್ತ, ರವಿಯ ಗಲ್ಲಗಳನ್ನು ತನ್ನ ಗಲ್ಲಗಳಿಗೆ ಒತ್ತಿ ಕುಳಿತಿರುವಾಗ, ಮತ್ತೆ ತಂದೆಯವರು ಒಳಗೆ ಬಂದರು. ತೇಜಸ್ವಿನಿ

ಇನ್ನೂ ಸಿಂಗಾರವಾಗಿರಲಿಲ್ಲ. ಹೂಗಳನ್ನು ಹಾಕಿಕೊಂಡಿರಲಿಲ್ಲ. ಕಾಲೇಜ ಜೀವನಚಿತ್ರಗಳು ಹಾರಿಹೋದಾಗ, ಅವೂ ಮಾಯವಾಗಿದ್ದವು. ರವಿಯನ್ನು ಸಿಂಗರಿಸಿರಲಿಲ್ಲ. ಇವನ್ನೆಲ್ಲ ನೋಡಿ ಅವರು ಅವಳಿಗೆ ಬೇಗ ತಯಾರಾಗಲು ಹೇಳಿದರು. ಆದರೆ ಅವಳಿಗೆ ಹೊರಬೀಳುವ ಮನಸ್ಸು ಆಗಲಿಲ್ಲ. ತಂದೆಯವರು ಎಷ್ಟು ಕೇಳಿದರೂ ಅವಳು ಒಲ್ಲೆನ್ನುವ ಹಟ ಹಿಡಿದಿದ್ದರಿಂದ, ಜುಲುಮೆ ಮಾಡದೆ ರವಿಯನ್ನು ಸಿಂಗರಿಸಿ ತಾವೇ ಕರೆದುಕೊಂಡುಹೋದರು.

ತೇಜಸ್ವಿನಿಗೆ ರವಿಯನ್ನೂ ಹೊರಗೆ ಕಳಿಸಬಾರದು ಎಂದು ಒಮ್ಮೆ ಎನಿಸಿತು. ಅವಳಿಗೆ ರಾಷ್ಟ್ರಧ್ವಜ, ಮೆರವಣಿಗೆ ಎಂದ ಕೂಡಲೆ ಮೈ ಜುಮ್ಮೆನಿಸುತ್ತಿತ್ತು. ಸ್ವತಃ ತನ್ನ ಹೃದಯದ ಮೂರುತಿಯನ್ನೆ ಅವಳು ಕಳಕೊಂಡಿದ್ದಳು. ೧೯೪೨ರ ಚಳವಳಿಯಲ್ಲಿ ಮೋಹನ ಜೇಲಿನಿಂದ ಓಡಿಬಂದಮೇಲೆ ಭೂಮಿಗತನಾಗಿ ತಿರುಗುತ್ತಿರುವಾಗ, ತೇಜಸ್ವಿನಿ ಇದ್ದ ಊರಲ್ಲಿಯೆ ಕಚೇರಿಯ ಮೇಲೆ ರಾಷ್ಟ್ರಧ್ವಜವನ್ನು ಏರಿಸುವ ಕಾರ್ಯಕ್ರಮವಿತ್ತು. ಆಗ ಅವನು ಅನೇಕ ಸ್ವಯಂಸೇವಕರನ್ನು ಕೂಡಿಸಿಕೊಂಡು ಗೊಂದಲಹಾಕುತ್ತ ಕಚೇರಿಯವರೆಗೆ ಹೋಗಿ ಧ್ವಜವನ್ನು ಏರಿಸಿದ—ಅಲ್ಲ ಏರಿಸುತ್ತಿದ್ದ. ಆದರೆ ಒಮ್ಮೆಲೆ ಪೋಲೀಸ ಪಡೆಯವರು ಕೂಡಿ ಗೋಳೀಬಾರ ಮಾಡುವ ಪ್ರಸಂಗ ಬಂದಿತು. ಮೋಹನ ಮೇಲೇರಿ ಧ್ವಜವನ್ನು ಹಾರಿಸಹೋದಾಗ–ಅಕಸ್ಮಾತ್ತಾಗಿ ಪಿಸ್ತೂಲಿನ ಸಪ್ಪಳವಾಯಿತು. ಮೋಹನ ಪಕ್ಕ ಕತ್ತರಿಸಿದ ಹಕ್ಕಿಯಂತೆ ಕೆಳಗುರುಳಿಬಿದ್ದನು. ಎದೆಯಲ್ಲಿ ಗುಂಡುಗಳು ಜೋರಾಗಿ ನಾಟಿದ್ದವು. ಕೈಯಲ್ಲಿ ಹಿಡಿದ ರಾಷ್ಟ್ರಧ್ವಜ ಹಾಗೆಯೆ ಇತ್ತು. ದವಾಖಾನೆಯಲ್ಲಿ ಅವನ ವೇಷ ಬದಲುಮಾಡಿ, ಪರೀಕ್ಷೆ ಮಾಡಿದಾಗ ಭೂಮಿಗತನಾದ ಮೋಹನ ಸಿಕ್ಕುದನ್ನು ಕಂಡು ನಮ್ಮ ದೇಶದ ಪೋಲೀಸರು ತಮಗೆ ಬಹುಮಾನ ಸಿಗುವದೆಂದು ಹೆಮ್ಮೆ ಮತ್ತು ಸಂತೋಷಪಟ್ಟರಂತೆ!

ಅವನ ಶವವನ್ನು ನೋಡಲು ಚಕ್ರವರ್ತಿ ಸರ್ಕಾರದವರು ಬಂಧುಬಳಗದವರಿಗೆ ಹೇಳಿಕಳಿಸಿದ್ದರು. ಆದರೆ ತೇಜಸ್ವಿನಿಗೆ ಮೈನಡುಗು! ಅವಳು ಭಯಂಕರವಾಗಿ ಭಯಭೀತಳಾಗಿದ್ದಳು! ಅವಳ ಮನಸ್ಥಿತಿ ತೀರ ಹದಗೆಟ್ಟಿತ್ತು! ಯಾರ ಮುಖವನ್ನು ನೋಡಿ ಅವಳು ಬದುಕಬೇಕು?

ಅಡುಗೆಯ ಮನೆಯಲ್ಲಿ ಮನಸ್ಸಿಲ್ಲದೆ ಆ ಕೆಲಸ ಈ ಕೆಲಸ ಮಾಡುತ್ತ ತೇಜಸ್ವಿನಿ ಓಡಾಡುತ್ತಿದ್ದಳು. 'ಯಾರ ಮುಖವನ್ನು ನೋಡಿ ಬದುಕಬೇಕು?' ಎಂದು ಮತ್ತೆ ಮತ್ತೆ ಕೇಳಿದಂತಾಯಿತು. ಹೊರಗಿನ ಜಗತ್ತಿಗೆ ಭಾರತಕ್ಕೆ ಸ್ವಾತಂತ್ರ್ಯ. ತನಗೆ ಯಾವ ಸ್ವಾತಂತ್ರ್ಯ? ಎಲ್ಲರಿಗೂ ಭಾರವಾಗಿ ಮನೆಯಲ್ಲಿ ಇದ್ದಾಳೆ. ಕಕ್ಕಂದಿರು ತನಗೆ ಎಷ್ಟು ವರ್ಷ ಹೀಗೆಯೆ ಹೊಟ್ಟೆಗೆ ಹಾಕಬೇಕು? ಗಂಡನ ಮನೆಗೆ ಹೋಗಬೇಕೆಂದರೆ ಅಲ್ಲಿ ಪ್ರವೇಶವಿಲ್ಲ. ತಾನು ಪಾಪಿ! ದೈವ ತನ್ನನ್ನು ಎಷ್ಟು ರೀತಿ ಪರೀಕ್ಷೆ ಮಾಡುತ್ತಿದೆಯೊ? ಯಾವ ಭಾವಿ ಕೆರೆಯಾದರೂ ಹಾರಿಕೊಂಡುಬಿಟ್ಟರೆ........?

ಎದುರಿಗೆ ಅಡಿಗೆಯುವಳು ತನ್ನ ಕೆಲಸ ಸಾಗಿಸಿದ್ದಳು. ಒಲೆ ಹೊತ್ತಿಸಿದ್ದಳು. ಅಡಿಗೆಗೆ ಬೇಕಾಗುವ ಎಲ್ಲ ಸಾಮಾನುಗಳನ್ನು ತಯಾರಮಾಡಿಕೊಳ್ಳುತ್ತಿದ್ದಳು. ನಡುನಡುವೆ ಒಲೆಯನ್ನು ಜೋರಾಗಿ ಊದುತ್ತಿದ್ದಳು. ಆ ಉರಿ ಭಗ್ಗನೆ ಮೇಲಕ್ಕೇಳುತ್ತಿತ್ತು.

ತೇಜಸ್ವಿನಿಗೂ ತನ್ನನ್ನು ಯಾರೊ ಒಳಗಿನಿಂದ ಊದುತ್ತಿದ್ದಾರೆಂದು ಅನಿಸಿತು. ಎದೆಯಲ್ಲಿ ಅಗ್ನಿಯ ತಾಂಡವನೃತ್ಯ ನಡೆದಂತೆ ಭಾಸವಾಯಿತು. ಎಂಥ ಜೀವನವು ಎಂಥ ಕಾಡಾಯಿತು! ಅವಳು ಬಿಕ್ಕಿ ಬಿಕ್ಕಿ ಅತ್ತಳು.

ಆದರೆ ಮೋಹನ ಮನಸ್ಸಿನಲ್ಲಿ ಯಾವಾಗಲೂ ಹೇಳುವಂತೆ ಹೇಳಿದ— 'ಬರುವುದರ ಕಣ್ಣನ್ನೆ ಕಾಣೊ' ಎಂದು. ಅವಳಿಗೆ ಅದೇ ಸಮಾಧಾನ. ಕಂಬನಿಗಳನ್ನು ಒರೆಸಿಕೊಂಡಳು.

ಅದೇ ಹೊರಗಿಂದ ನಗುತ್ತ ಬಂದ ತಂದೆಯವರು ಆ ಭಾರವಾದ ಕಂಬನಿದುಂಬಿದ ಕಣ್ಣುಗಳನ್ನು ನೋಡಿದರು. ಮಗಳ ಸಂತೋಷಕ್ಕಾಗಿ ರಾತ್ರಿ ಚಲಚಿತ್ರಕ್ಕೆ ಎಲ್ಲರನ್ನು ಕರೆದುಕೊಂಡು ಹೋದರು. ಅದೂ ಹೆಂಗಸಿನ ದುಃಖವನ್ನು ವ್ಯಕ್ತಮಾಡುವ 'ಶಕುಂತಲಾ' ಸಿನೇಮಾವಾಗಿತ್ತು. ತೇಜಸ್ವಿನಿ ಹಲವು ಮಟ್ಟಿಗೆ ತಾನೂ ಶಂಕುಂತಲಾ ಎಂದು ತಿಳಿದುಕೊಂಡಳು. ಜಗತ್ತಿನ ಅಪಾರ ದುಃಖವನ್ನು ನೆನೆದು, ತನ್ನ ದುಃಖದ ನೋವನ್ನು ತಾಳಿಕೊಂಡಳು.

ಅವರು ಟಾಂಗಾದಲ್ಲಿ ಕುಳಿತು ತಿರುಗಿಬರುವಹೊತ್ತಿಗೆ — ಮನೆಯ ಮುಂದೆ ಮತ್ತೊಂದು ಟಾಂಗಾ ನಿಂತಿತ್ತು !

× × × ×

ಟಾಂಗಾದ ಎರಡೂ ಚಕ್ರಗಳು ಜೋರಾಗಿ ತಿರುಗುತ್ತಿದ್ದವು. ಮನೆಯ ಕಡೆ ಸಾಗಿದ ನಾಗರಾಜರಿಗೆ ತಲೆಯಲ್ಲಿ ಚಕ್ರವೇನೊ ತಿರುಗುತ್ತಿರಲಿಲ್ಲ. ಮನಸ್ಸು ಸಮಾಧಾನವಾಗಿತ್ತು. ತೊಡೆಯಮೇಲೆ ರವಿಯು ಕುಳಿತಿದ್ದನು.

ನಾಗರಾಜರು ಕಿಸೆಯಲ್ಲಿರುವ ಬಾಡಿದ ಹೂವನ್ನು ರವಿಗೆ ಕೊಟ್ಟು "ಇದರ ವಾಸನೆ ನೋಡು" ಎಂದು ಅವ್ವನ ಕಡೆ ಬೊಟ್ಟುಮಾಡಿ ತೋರಿಸಿದರು.

ತೇಜಸ್ವಿನಿ ನಕ್ಕಳು. ನಾಗರಾಜರು ಮೊಮ್ಮಗನಿಗೆ ಮುದ್ದುಕೊಟ್ಟು ನಕ್ಕರು.

——— ———

# ಫಲ ಸಂಚಯ

## (ನಾಲ್ಕು ರಾತ್ರಿಗಳಲ್ಲಿ)



### ರಾತ್ರಿ ೧

ಎಲ್ಲಿಂದಲೋ ಒಮ್ಮೆಲೆ ಮೋಡಗಳು ಮುಸುಕಿದವು. ಪ್ರಳಯದಂತೆ ಗಾಳಿಯು ಬೀಸಿತು. ಇರುಳುಗತ್ತಲೆ ಕರಾಳ ರೂಪವನ್ನು ತಳೆದಿತು.

ಮನೆಯ ಚಪ್ಪರಗಳು ಹಾರಿದವು! ಮರಗಳು ಉರುಳಿದವು! ಗಡಿಗೆಗಳು ಗಡಗಡನೆ ಹೊರಳಿದವು! ಓಣಿಯಿಂದ ಜನರೆಲ್ಲ ಚದರಿದರು!

ಬಾಗಿಲದ ಬಳಿಯಲ್ಲಿ ನಿಂತು, ಕರಗಳನ್ನು ಎದೆಗವುಚಿಕೊಂಡು, ಬೆದಕುಗಣ್ಣುಗಳಿಂದ ಮಾಳಿ ನೋಡಿದಳು. ನಭವೆ ಕಡಿ ಕಡಿದು ಕೆಳಬೀಳುವಂತೆ ಕಂಡಿತು. ಸಂತೆಗೆಂದು ಹೋದ ತಂದೆ ಇನ್ನೂ ಅಂಬಲೂರಿಗೆ ತಿರುಗಲಿಲ್ಲ. ಚಿಂತೆ ಮನೆಮಾಡಿತು. ಭೀತಿ ಇಮ್ಮಡಿಸಿತು. ನೆಲವೆಲ್ಲ ಎದ್ದು ತನ್ನನ್ನು ತಿನ್ನುವಂತೆ ಭಾಸವಾಯಿತು.

ಚಿಟ್ಟನೆ ಚೀರಿ ನೆಲಕ್ಕುರುಳಿದಳು! ಅವಳ ದೇಹ ಬುವಿಯ ಸ್ಪರ್ಶ ಮಾಡುವ ಮುನ್ನ ಬಸವರಸ ಅವಳನ್ನು ಎತ್ತಿಹಿಡಿದ. "ಇಷ್ಟೇಕೆ ಭಯ ನಿಮಗೆ?" ಎಂದು ಕೇಳಿದ. ಅವಳು ಸರಿದು ದೂರ ನಿಂತಳು. ಸೆರಗನ್ನು ಸಾವರಿಸಿ ಹಣೆಯವರೆಗೂ ಮುಚ್ಚಿಕೊಂಡಳು.

ಅವಳ ಆ ನಾಚಿಕೆಯನ್ನು ಕಂಡು ಬಸವರಸ ತಲೆಬಾಗಿದ. ತಾನು ಹಗಲಿನಲ್ಲಿ ಕಡವಾಗಿ ಒಯ್ದ ಗಡಿಗೆಗಳನ್ನು ಅವಳೆದುರು ಇರಿಸಿದ. ಅವಳ ಉಪಕಾರವನ್ನು ನೆನೆದು ಹೊರಹೊರಟ.

ಕೂಡಲೆ ಭೋರೆಂದು ಮರವುಳೆಯು ಸುರಿಯಹತ್ತಿತು. ಅವನ ಅರಿವೆಗಳು ತೊಯ್ದು ನೀರಾದವು, ಇನ್ನೆಲ್ಲಿಗೆ ಹೋಗುವುದು? ಯಾರನ್ನು ಕೇಳು

ವುದು ? ಅಂಬಲೂರಿಗೆ ಧರ್ಮಶಾಲೆಯುಂಟೆ ? ಬಂದ ದಾರಿಗೆ ಸುಂಕವಿಲ್ಲ ವೆಂಬಂತೆ ತಿರುಗಿ ಓಡಿದ.

" ತಾಯೀ.... " ಕಮಲದ ಮೊಗ್ಗೆಯಂತೆ ಬದ್ಧಾಂಜಲಿಯಾಗಿ ಅಂಗಳ ದಲ್ಲಿ ನಿಂತು ದೀನವಾಣಿಯಿಂದ ಕೇಳಿದ.

' ತಾಯೀ ' ಎಂದು ಕೂಗಿದೊಡನೆ ಚಿಕ್ಕವಳಾದ ಮಾಳಿ ಬೆಚ್ಚಿಬಿದ್ದಳು. ಅವಳೆಂದಿಗೂ ತಾಯಿಯಾಗಿರಲಿಲ್ಲ. ಅವಳು ಪುಟ್ಟ ವಿಧವೆ.

ಮುಗಿಲಲ್ಲಿ ಸೆಳೆದ ಮಿಂಚು ಅಂಗಳದಲ್ಲಿ ನಿಂತ ಶಿವನ ಹಸಾದದಿಂದ ಹೊಳೆಯುವ ಬಸವರಸನ ದೇಹದ ಕಾಂತಿಯನ್ನು ಝಳಪಿಸಿತು. " ಬನ್ನಿ " ಎಂದು ಅವನನ್ನು ಒಳಗೆ ಬರಮಾಡಿಕೊಂಡಳು.

ಚಲುವಿನ ಮಾಳಿಯು ಒಲವಿನ ಆತಿಥ್ಯ ನೀಡಿದಳು. ತನಿವಣ್ಣುಗಳ ಕೊಟ್ಟು ತೆರತೆರನಾಗಿ ಉಪಚರಿಸಿದಳು. ಕಾಶಿಯಿಂದ ಈ ವರೆಗೂ ನಡೆದು ಬಂದ ದಾರಿಯ ಶ್ರಮವು ಹಾರಿಹೋಗಲು, ಬಸವರಸ ಮುಗ್ಧನೇತ್ರಗಳಿಂದ ಅವಳ ಸೊಬಗ ನೀಕ್ಷಿಸಿದ. ಮನವು ಮಮತೆಯಿಂದೊಡಗೂಡಿತು.

ಬಸವರಸನ ಬರವು ಅವಳಲ್ಲಿ ಮಿಂಚಿನ ಸಂಚಾರವನ್ನು ಪ್ರಚೋದಿಸಿತು. ಒಲವಿನ ಬಳ್ಳಿ ಹೃದಯದ ತುಂಬ ಪಸರಿಸಿತು. ದಿಕ್ಕುತಪ್ಪಿ ನಡೆವ ಇರುಳ ರಾಣಿಗೆ ಅರುಣನನ್ನು ಕಂಡಂತಾಯಿತು. ಎಂದೂ ಇಲ್ಲದ ಅನುಭವ ಅವಳಿಗೆ.

ತಂದೆಯು ಇನ್ನೂ ಬರಲಿಲ್ಲ !!

ರಾತ್ರಿಯಲ್ಲಿ ಧೋ ಧೋ ಮಳೆ ! ಸುಯ್ಯೆನುವ ಗಾಳಿ ! ಗುಡುಗುಗಳ ಗುಡುಗಾಟ ! ವಿದ್ಯುಲ್ಲತೆಗಳ ಸಂಚಾರ !

ಕಪಾಟಿನಲ್ಲಿರುವ ಪಾರಿವಾಳಗಳು ಪ್ರೇಮದಿಂದ ಗುಟುಕರಿಸುತ್ತಿದ್ದವು ! ಯಾವುದೋ ಫಲ ರುಚಿ ನೋಡುತ್ತಿದ್ದವು !

**ರಾತ್ರಿ ೨**

ತಲೆಗಿಂಬಿಗೆ ತಲೆಯನ್ನು ತಿಕ್ಕಿದಳು. ಅತ್ತಿತ್ತ ಉರುಳಿದಳು. ನಡು ರಾತ್ರಿಯಾದರೂ ಅಕ್ಕಮಲ್ಲಮ್ಮನಿಗೆ ನಿದ್ದೆಯೆ ಇಲ್ಲ. ಮನವು ಭಾರವಾಗಿತ್ತು. ಚಿಂತೆಯಿಂದ ನರಗಳು ಹೊಡೆಯುತ್ತಿದ್ದವು.

ಸನಿಹದಲ್ಲಿಯೆ ಬಸವರಸ! ಗಾಢನಿದ್ದೆ !!

ಅಕ್ಕಮಲ್ಲಮ್ಮ ಮೊದಲು ಹಲವುಸಲ ಅಕ್ಕರೆಯಿಂದ ಕರೆದರೂ ಬಸವ ಏಳದಿರುವದನ್ನು ಕಂಡು ಕೋಪಗೊಂಡಳು. ಜೋರಾಗಿಯೇ ಕೂಗಿದಳು.

ಕನಸಿನ ಸಾಮ್ರಾಜ್ಯದಿಂದ ಎಚ್ಚತ್ತು, ಬಸವರಸ ಕಣ್ಣು ಉಜ್ಜಿಕೊಂಡ. ಅರೆತೆರೆದ ನಯನಗಳಿಂದಲೆ ಅಕ್ಕಮಲ್ಲಮ್ಮನನ್ನು ನೋಡಿದ.

ಅಕ್ಕಮಲ್ಲಮ್ಮ ಇನಿಯನ ಸನಿಹದಲ್ಲಿ ಬಂದು ಕೇಳಿದಳು–" ಕಾಶಿಯಾಯಿತು, ರಾಮೇಶ್ವರವಾಯಿತು. ದಾನಮಾಡಿದುದಾಯಿತು. ಪುಣ್ಯಗಳಿಸುವುದಾಯಿತು. ಇನ್ನೂ ಎಲ್ಲಿದೆ ಆದರ ಫಲ ? "

" ನನಗೀಗ ನಿದ್ದೆ ಬಂದಿದೆ. ಆ ಮಾತು ತೆಗೆಯಬೇಡ. ತಿಳಿಯಿತೆ?"

" ಒಹೋ ! ನಿಮಗೆಲ್ಲಿಯದು ಆ ಚಿಂತೆ? ಹಾಸಿಗೆಯಲ್ಲುರುಳುವುದೊಂದೇ ತಡ, ಗುರುಕಿ ಹೊಡೆಯಲು ಪ್ರಾರಂಭ. ಯಾವಾಗಲೂ ನಿದ್ದೆ. ನಾನು ಕೇಳುವ ಪ್ರಶ್ನೆಗೆ ಉತ್ತರವೇ ಇಲ್ಲ. "

" ಅಲ್ಲೆ, ಹಾಗೆ ಕಾಶೀವಿಶ್ವೇಶ್ವರ ನಮಗೆ ದಯದೋರುವದಿಲ್ಲವೆಂದು ಶಪಿಸಬಾರದು. ನಾನು ಅಲ್ಲಿ ಹೋಗಿ ಆರಾಧನೆ ಮಾಡಿದಾಗಲೆ ನಮಗೆ ಆಶೀರ್ವದಿಸಿದ್ದಾನೆ. ನೀನೇನಾದರೂ ಅಂದರೆ ಅವನು ನಿನ್ನ ಮೂಗು ಕೊಯ್ದು ಬಿಡುತ್ತಾನೆ. "

" ನಿದ್ದೆ ಬಂದಿದೆ ಅನ್ನುವದು ಚೇಷ್ಟೆಮಾತ್ರ ಬಿಡುವಹಾಗಿಲ್ಲ. ಆರಾಧನೆಯಾಯಿತು. ಪ್ರಸಾದವಾಯಿತು. ನನ್ನ ಪ್ರಶ್ನೆಗೆ ಏನಂತೀರಿ ? "

" ಹಾಗಾದರೆ ನಾನೂ ಕೇಳಲೆ? ದಿನಾಲು ಅಶ್ವತ್ಥ ವೃಕ್ಷದಸುತ್ತ ತಿರುಗುತ್ತ, ಮನೆಗೆಲಸವನ್ನು ಸಹ ಮಾಡುವ ಹಾಗಿಲ್ಲ. ಆ ಅಶ್ವತ್ಥದ ಫಲ ಎಲ್ಲಿದೆ ಹೇಳು ? "

" ನೀವೇನು ಫಲ ಅಂದರೆ ಪೇಟೆಯಲ್ಲಿ ಸಿಗುವ ಬಾಳೇಫಲ, ಸೀತಾಫಲ ಎಂದು ತಿಳಿದಿರುವಿರೇನು ? ನಿಮಗೆ ಯಾವುದೂ....ಇಲ್ಲ. "

ತಾನು ಗಂಭೀರ ವಿಚಾರ ಮಾಡುವಾಗಲೂ, ಬಸವರಸ ಚೇಷ್ಟೆ ಮಾಡುವುದನ್ನು ಕಂಡು, ಅಕ್ಕಮಲ್ಲಮ್ಮ ಅಳಲಾರಂಭಿಸಿದಳು.

ಬಸವರಸ ಎಚ್ಚತ್ತು ಚೆನ್ನಾಗಿ ಕುಳಿತ. ಅದೇ ಆಗ ಬಿದ್ದ ಕನಸನ್ನು ನೆನಸಿಕೊಂಡ. ಹೆಂಡತಿಯನ್ನು ಸಮಾಧಾನಮಾಡಿ ಆ ಕನಸು ಬಣ್ಣಿಸ ಲಾರಂಭಿಸಿದ.

" ಕಾಶೀ ವಿಶ್ವೇಶ್ವರನು ಪ್ರತ್ಯಕ್ಷನಾದ. ಅವನ ಬೆನ್ನ ಹಿಂದೆಯೆ ಪಾರ್ವತಿಯು ಬಂದು, ಹಲವು ಹಣ್ಣು ಹಂಪಲುಗಳನ್ನು" ಬಸವರಸನ ನಾಲಗೆಯು ಥತ್ತರಿಸಿತು.

" ಮುಂದೆ ? ಮುಂದೆ ? " ಎಂದು ಅಕ್ಕಮಲ್ಲಮ್ಮ ಕುತೂಹಲಿಯಾಗಿ ಕೇಳಿದಳು.

" ಆ ಹಣ್ಣುಗಳನ್ನು ನೀನು ಮುಟ್ಟಲಿಲ್ಲ. ಮತ್ತೊಬ್ಬಳು........ "

" ಆ್ಞಽಽಽಽ ? ಏನಂದಿರಿ ? " ಎಂದು ರೌಸಿನಿಂದ ಎದ್ದು ಕುಳಿತಳು. ಬಸವರಸ ಹಾಸಿಗೆಯಿಂದ ದೂರ ಸರಿದು ಕಿಡಿಕೆಗಳನ್ನು ತೆರೆದ.

ಧೋ ಧೋ ಮಳೆ ಸುರಿಯುತ್ತಿತ್ತು ! ಸುಯ್ಯೆನ್ನುವ ಗಾಳಿ ಬೀಸುತ್ತಿತ್ತು ! ಅವನಿಗೆ ಆ ರಾತ್ರಿ ನೆನಪಾಯಿತು ! ತನ್ನ ಮಗುವು ಅಲ್ಲಿಯೆ ಇರಬೇಕೆಂದೆನಿಸಿತು !

" ನಮಗೆ ಮಗುವಾಗಿದೆ....ನಮ್ಮ ಬಯಕೆ ಕೈಗೂಡಿದೆ....ದೇವರ ಕೃಪೆಯಿಂದ " ಎಂದು ಅಕ್ಕಮಲ್ಲಮ್ಮನಿಗೆ ಎದೆದುಂಬಿ ಹೇಳಿದ.

" ಮಗು !....ಅಯ್ಯೋ, ಅಯ್ಯೋ....ನೀವಿಲ್ಲಿ ನಿಲ್ಲಬೇಡಿ....ಮನೆಬಿಟ್ಟು ಹೊರಗೆ ನಡೆಯಿರಿ....ಮಗು !! " ಎಂದು ಅಕ್ಕಮಲ್ಲಮ್ಮ ಚೀರಿಕೊಂಡಳು.

ಬಸವರಸ ಮತ್ತೆ ಆ ಮಳೆಯನ್ನೆ ನೋಡುತ್ತಲಿದ್ದ. ಮಳೆಯಲ್ಲಿ ತನ್ನ ಮಗು ನಲಿದಂತೆ ಭಾಸವಾಯಿತು. ಆ ಮಗುವನ್ನು ಅಪ್ಪಿಕೊಳ್ಳಬೇಕು ಎಂದೆನಿಸಿತು. ತನ್ನ ಆಶೆಯ ಮರವು ಫಲಬಿಟ್ಟ ಅನುಭವವಾಯಿತು.

## ರಾತ್ರಿ ೩

ಮಾಳಿಯು ಮಗುವನ್ನು ಬಿಗಿಯಾಗಿ ಅಪ್ಪಿಕೊಂಡಳು. ಜನರೆಲ್ಲರೂ ಚದರಿದ್ದರು. ಮನೆಯ ಬಾಗಿಲ ಗಟ್ಟಿಯಾಗಿ ಇಕ್ಕಿತ್ತು. ಕುಂಬಾರ ಸಾಲೆಯ ಗದ್ದಲವು ಒಮ್ಮೆಲೇ ಸ್ತಬ್ಧ.

ಆಗಸದಲ್ಲಿ ಅಲ್ಲಲ್ಲಿ ಚಿಕ್ಕೆಗಳು ಮಿನುಗುತ್ತಿದ್ದವು. ತಂಪಾದ ಗಾಳಿ ಅವಳ ಮುಂಗುರುಳನ್ನು ತೀಡಿ ಬೀಸುತ್ತಿತ್ತು. ಯಾವುದೋ ಶಕ್ತಿ ಅವಳ ಕಿವಿಯಲ್ಲಿ ಊದಿ ಚೇತನೆಯನ್ನು ನೀಡಿದಂತಾಯಿತು. ಮಗುವನ್ನಪ್ಪಿ ಅವಳು ಮುಂದೆ ಮುಂದೆ ಸಾಗಿರಲು, ಆ ಶಕ್ತಿ ಸಮಾಧಾನದ ಮಾತುಗಳ ನ್ನಾಡಿದಂತಾಗುತ್ತಿತ್ತು.—

“ ತಾಯಿ, ಗಾಳಿಗುಂಟ ನಡೆ. ಕಂಬನಿಗಳನ್ನು ಸುರಿಸಬೇಡ. ಕಷ್ಟ ಗಳನ್ನು ನೆನೆನೆನೆದು ಉಮ್ಮಳಿಸಬೇಡ. ಹಲವರು ನಿನ್ನನ್ನು ಬಡಿದಿರ ಬಹುದು. ಕೆಲವರು ಸಮಾಜದಲ್ಲಿಯ ‘ ಪಾಪಿ ’ ಎಂದು ಕೂಗಿರಬಹುದು. ಇನ್ನುಳಿದವರು ಉಗುಳಿರಬಹುದು. ನಿನ್ನನ್ನು ಹಡೆದ ತಂದೆಯೆ ನಿನ್ನನ್ನು ಹೊರಗಟ್ಟಿದಮೇಲೆ ಯಾರನ್ನು ನಂಬುವದು ?...........”

ಮಾಳಿ ನನ್ನ ತಂದೆಯ ಕಠೋರ ಹೃದಯವನ್ನು, ಸಿಟ್ಟಿನ ಮೊಗವನ್ನು ನೆನೆಸಿಕೊಂಡಳು. ತಾನು ಹಡೆಯುವವರೆಗೆ ಸುಮ್ಮನಿದ್ದು, ಹಡೆದ ಮೇಲೆ ನಾಲ್ಕು ಜನರು ಏನೋ ಮಾತನಾಡಿದರೆಂದು ತನ್ನನ್ನು ಹೊರಗೆ ಹಾಕಬೇಕಾ ದರೆ ....?

ಮತ್ತೆ ಆ ಶಕ್ತಿ ಹೇಳಿತು—

“ ಅದೂ ಅವನ ತಪ್ಪೆ ? ಸಮಾಜದ ಕಡಿವಾಣದಲ್ಲಿ ಅವನು ಸಿಕ್ಕಿದ್ದಾನೆ. ನೀನು ದೈವದ ಕೈಯಲ್ಲಿ ಸಿಕ್ಕಿರುವಿ. ನೀನು ಚಿಕ್ಕವಳಿರುವಾಗಲೆ ನಿನ್ನ ಪತಿಯ ಜೀವ ಹಾರಿಹೋಗಲಿಲ್ಲವೆ ? ಬಲವಿಲ್ಲದ ಅಬಲೆ ನೀನು. ಏಕೆ ಅಳುವೆ ?.... ನಿನಗೆ ಮಗುವಿದೆ ಅದು ಸಾಮಾನ್ಯ ಮಗುವಲ್ಲ. ದೇವರ ಕೃಪೆ ಯಿಂದ ಹುಟ್ಟಿದ್ದು ....ಕಷ್ಟದ ದಾರಿಯಲ್ಲಿ ಸುಖವಿದೆ. ಗುಲಾಬಿಯ ಹೂವಿನ ಸುತ್ತು ಮುಳ್ಳುಗಳಿಲ್ಲವೆ ? ಅಡಿಯ ಮುಂದಿಡು. ನಾನಿದ್ದೇನೆ. ನಿನ್ನನ್ನು ಕರೆದುಕೊಂಡು ಹೋಗುವೆ. ”

ಮಾಳಿ ಆ ಮಗುವನ್ನು ಅಮುಚಿಕೊಂಡು ಮುಂದೆ ಮುಂದೆ ಸಾಗಿದಳು. ಹೊಸ ವರ್ಷಾಕಾಲದ ಕಾರ್ಮೋಡ ಅಂಬರದಲ್ಲಿ ಈಜುತ್ತಿದ್ದವು. ಅವಳಿಗೆ ಸ್ವಚ್ಛಂದ ಪ್ರೇಮದ ಆ ರಾತ್ರಿ ನೆನಪಾಗಿ ಅವಳು ಗೋಳೋ ಎಂದು ಅತ್ತು ಬಿಟ್ಟಳು.

**ರಾತ್ರಿ ೪**

ಬೆಳಗಿನ ಜಾವವಿನ್ನೂ ಆಗಿಲ್ಲ. ಮಾಳಿ ಬೀಸುವದನ್ನು ಬಿಟ್ಟು ಕುಳಿತಿದ್ದಾಳೆ. ರಾತ್ರಿಯೆಲ್ಲ ಹಾಗೆಯೆ ಕುಳಿತಿದ್ದಾಳೆ.

“ ನೋಡು, ಪುಷ್ಪದತ್ತಾ. ನೋಡು ಮಗು. ಬೀಸುವ ಮುಂದೆ ನಿನ್ನನ್ನು ತೊಡೆಯ ಮೇಲೆ ಮಲಗಿಸಿಕೊಂಡು, ಬಡವಿಯ ಹಾಡುಗಳನ್ನು ಹೇಳುತ್ತಿದ್ದೆ. ಆ ಸೌಖ್ಯವನ್ನು ಮರೆತೆಯಾ? ಹತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತು ನಿನ್ನನ್ನು ಕಾಪಾಡಿದ್ದೇನೆ. ಅದನ್ನೂ ಮರೆತುಬಿಟ್ಟೆಯಾ? ಮನೆಮನೆಗೆ ಹೋಗಿ ಬಿಕ್ಷೆ ಬೇಡಿ ನಿನ್ನನ್ನು ಸಾಕಿಸಲುಹಿದ್ದೇನೆ. ಅನೇಕ ಕಷ್ಟಗಳನ್ನು ಸಹಿಸಿದ್ದೇನೆ. ಎಲ್ಲವನ್ನೂ ಮರೆತುಬಿಡುವೆಯಾ? ನಿನ್ನನ್ನು ನಂಬಿ ನಾನು ಸುಖದ ಅಂಬಾರಿ ಏರಿದೆ. ನಿನ್ನ ಮುಖ ಚಂದ್ರಾಮನನ್ನು ನೋಡಿ ನಾನು ಕತ್ತಲೆಯನ್ನು ಮರೆತೆ ಆದರೆ........ ”

ಪುಷ್ಪದತ್ತ ತಾಯಿಯ ತೊಡೆಯಮೇಲೆ ತನ್ನ ತಲೆಯನ್ನು ಇಟ್ಟು ಅವಳ ಎರಡೂ ಕೈಗಳನ್ನು ಬಿಗಿಯಾಗಿ ಹಿಡಿದು ಹೇಳಿದ. “ ತಾಯಿ, ನಿನ್ನನ್ನು ನಾನು ವಂಚಿಸುವದಿಲ್ಲ. ನನಗೇಕೊ ಹೋಗಬೇಕೆನ್ನಿಸುತ್ತದೆ ಹೋಗುವೆ. ಬುದ್ಧನು ಹಿಂದಕ್ಕೆ ಯಾರಿಗೂ ಹೇಳದೆ ರಾತ್ರಿಯಲ್ಲಿ ಅರಮನೆಯಿಂದ ಜಾರಿಹೋದ, ನಾನು ಹಾಗೇನು ಮಾಡಿಲ್ಲವಲ್ಲ? ”

“ ಮಗು ಪುಷ್ಪದತ್ತಾ, ನೀನು ಹೂವಾಗಿ ಫಲವಾಗಿ ನಮಗೆ ಸವಿಯೂಟ ಮಾಡಿಸುವಿಯೆಂದು ನಂಬಿದ್ದೆ....ಆದರೆ....? ನಮ್ಮನ್ನು ಬಿಟ್ಟು ಹೋಗುವಿಯಾ? ನಿನ್ನ ತಂದೆ— ನೀನು ಹಗಲೆಲ್ಲ ಕೇಳುವ ತಂದೆ ಈ ಮುರುಕು ಗುಡಿಸಲಿಗೆ ಬಂದಿದ್ದಾರೆ. ಅವರನ್ನು ಬಿಟ್ಟು ಹೋಗುವಿಯಾ? ”

ಬಸವರಸ ಗುಡಿಸಲಿನ ಮುರುಕು ಗೋಡೆಗೆ ಆತುಕೊಂಡು ಕುಳಿತಿದ್ದ. ತನ್ನ ಮಗುವನ್ನು ಹುಡುಕುತ್ತ ಅನೇಕ ಹಳ್ಳಿಗಳ ಶೋಧಮಾಡಿ, ಕೊನೆಗೆ ಮಾಳಿಯನ್ನು, ಪುಷ್ಪದತ್ತನನ್ನು ಕಂಡಿದ್ದ. ಪುಷ್ಪದತ್ತನನ್ನೂ ಮಾಳಿಯನ್ನೂ ತನ್ನ ಊರಿಗೆ ಕರೆದುಕೊಂಡು ಹೋಗಬೇಕೆಂದು ಹಲವುಸಲ ಯತ್ನಿಸಿದರೂ ಸಾಧ್ಯವಾಗಿರಲಿಲ್ಲ. ಈ ದಿನ ಹೇಗಾದರೂ ಮಾಡಿ ಅವರನ್ನು ಕರೆದುಕೊಂಡೇ ಹೋಗಬೇಕೆಂದು ಅಲ್ಲಿಗೆ ಬಂದಿದ್ದ.

ಪುಷ್ಪದತ್ತನ ಮನಸ್ಸು ಬದಲಿಸಬೇಕೆಂದು, ಅವನ ಹತ್ತಿರ ಬಂದು ಅವನ ಕೈಹಿಡಿದು ಹೇಳಿದ. "ನಿನ್ನ ತಾಯಿಯನ್ನು ನೋಡು ಮಗು. ಆವಳ ಕಂಬನಿಗಳನ್ನು ಒರೆಸು. ಅಂತಹ ಗಂಭೀರ ವಿಚಾರವೇಕೆ? ನಿನ್ನ ವಯಸ್ಸು ಇನ್ನೂ ಚಿಕ್ಕದಿದೆ. ನಡೆ, ನಮ್ಮೂರಿಗೆ ಹೋಗೋಣ. ಬೇಕಾದಷ್ಟು ಸುಖನನ್ನು ಅನುಭವಿಸೋಣ ನನ್ನನ್ನು ಅಪ್ಪಿಕೊ. ನನ್ನ ಕನಸನ್ನು ನನಸನ್ನಾಗಿ ಮಾಡು."

"ತಂದೆ ತಾಯಿಗಳು ನೀವೇ ಇದ್ದರೆ ನಿಮಗೆ ನನ್ನ ಅನಂತ ಪ್ರಣಾಮಗಳು. ಆದರೆ ನಿಮಗಿಂತಲೂ ಎಷ್ಟೋಪಾಲು ಹೆಚ್ಚಿನವರಾದ ತಂದೆ ತಾಯಿಗಳು ನನಗಿದ್ದಾರೆ. ಶಿವ ಪಾರ್ವತಿಯರೆ ನನ್ನ ನಿಜವಾದ ತಂದೆ ತಾಯಿಗಳು. ಅವರೆ ನನ್ನನ್ನು ಕಾಪಾಡುವರು. ಮೇಲೆ ಲಕ್ಷ ನಕ್ಷತ್ರಗಳಲ್ಲಿ ಅವರು ಕುಳಿತು ನನಗೆ ದಾರಿತೋರುತ್ತಿದ್ದಾರೆ. ಅನೇಕ ಮಾತುಗಳನ್ನು ಕಿವಿಯಲ್ಲಿ ಹೇಳುತ್ತಿದ್ದಾರೆ. ಅವರ ಮಾತು ನಾನು ಕೇಳಬೇಡವೆ?"

"ಮಗೂ, ನನ್ನ ಮಾತು ಕೇಳುವದಿಲ್ಲವೆ?" ಎಂದು ದೀನವಾಣಿಯಿಂದ ಮಾಳಿ ನುಡಿದಳು. "ನಾನು ತಾಯಿಯಲ್ಲವೆ? ಇವರು ನಿನ್ನ ತಂದೆಯಲ್ಲವೆ? ನಮ್ಮದೇನೂ ಬೇಡವೆ ನಿನಗೆ?"

"ಅಹುದು, ತಾಯಿ. ಎಂತಹ ಪುಣ್ಯ ನಿಮ್ಮದು! ನೀವು ಸ್ವಚ್ಛಂದವಾಗಿ ಪ್ರೀತಿಸಿದಿರಿ. ಅಂತೆಯೆ ನೀವು ಜನಕ್ಕೆ ಬೇಡಾದಿರಿ! ನೀನು ಕುಂಬಾರಳು; ಇವರು ಬ್ರಾಹ್ಮಣರು. ಈ ಜಾತಿಭೇದ ಜಗತ್ತಿನ ನೀತಿಯನ್ನು ಅದೋಗತಿಗಿಳಿಸಿದೆ. ತಾಯಿ, ನಿನ್ನ ಕಷ್ಟದ ಕಥೆ ನನಗೆ ತಿಳಿದಿದೆ. ಈ ಚಿಕ್ಕ ವಯದಲ್ಲಿಯೂ ನನಗೆ ತಿಳಿದಿದೆ. ಅದನ್ನು ಕೇಳಿದಂದಿನಿಂದಲೂ ನನಗೋಕೊ ಮನಸ್ಸಿನಲ್ಲಿ ವಿರಾಮವಿಲ್ಲ. ಜಗತ್ತೆ ನನ್ನ ಮನೆ, ಆಕಾಶವೆ ನನಗೆ ರಕ್ಷಣೆ, ನೀವಿಬ್ಬರೂ ಏನನ್ನು ಚಿಂತಿಸಬೇಡಿ."

"ಮಗೂ, ಸಾಯುವುದೊಂದೆ ನನಗೆ ಉಳಿಯಿತು." ಬಸವರಸ ತನಗೆ ಮಕ್ಕಳಾಗಬೇಕೆಂದೂ, ಮಕ್ಕಳ ಸುಖ ಪಡೆಯಬೇಕೆಂದೂ, ತಾನು ಕಾಶಿಯವರೆಗೂ ಹೋಗಿ ಕಷ್ಟಬಟ್ಟ ತನ್ನ ಆರಾಧನೆಯ ಶ್ರಮವನ್ನು ನೆನೆದುಕೊಂಡ. ಪುಷ್ಪದತ್ತ ಅಪೂರ್ವವಾದ ಶಕ್ತಿಯುಳ್ಳವನೆಂದು ಅವನಿಗೆ ಮನ

ದಟ್ಟಾಗಿತ್ತು. ಅವನನ್ನು ಕಳೆದುಕೊಳ್ಳುವೆನಲ್ಲಾ ಎಂಬ ಅಸಂತೋಷ ಅವನ ದೇಹವನ್ನು ನಡುಗಿಸಿತು. "ಪುಷ್ಪದತ್ತಾ, ದೇವರಿಗೆ ಹರಕೆ ಹೊತ್ತ ಸಾಧನೆಯ ಫಲವೆಲ್ಲ ನಾಶವಾಯಿತೆ ?" ಎಂದು ನಡಗುವ ಧ್ವನಿಯಲ್ಲಿ ಕೇಳಿದ.

ಮಾಳಿ ಮಗನ ನಿಶ್ಚಯವನ್ನು ಅರಿತಳು. ತಾನು ಕಷ್ಟಬಟ್ಟ ಅನೇಕ ಸಂಗತಿಗಳನ್ನು ನೆನೆದಳು. ಸಣ್ಣವಳಿದ್ದಾಗಲೆ ಲಗ್ನವಾದುದು, ಮದುವೆಯ ಸುಖ ಅನುಭವಿಸುವ ಮುನ್ನ ಗಂಡ ತೀರಿಹೋದುದು, ಹೆರವರ ಬಿರುನುಡಿಗಳನ್ನು ತಾಳಿಕೊಂಡುದು ಎಲ್ಲವೂ ನೆನಪಾದವು. ತಾನು ಮಗನ ಸಲುವಾಗಿ ಜೀವಿಸುವುದನ್ನು ತಿಳಿದು ಮತ್ತೂ ಒಮ್ಮೆ ಪುಷ್ಪದತ್ತನಿಗೆ ಹೇಳಿದಳು— "ಮಗೂ, ಮಗನಿದ್ದರೆ ಜಗಬೇಕು. ಇಲ್ಲವಾದರೆ....? ಮಗನಾದ ನೀನೇ ಎತ್ತಕಡೆಗೊ ಹೋದರೆ ನಾನೇನು ಮಾಡುವುದು? ತಾಯಿಯಾದರೂ ಏತಕ್ಕೆ ನಾನಾಗಬೇಕಾಯಿತು! ಅಯ್ಯೋ....ದೇವರೆ?" ಮಾಳಿ ಬಿಕ್ಕಿ ಬಿಕ್ಕಿ ಅತ್ತಳು.

ಪುಷ್ಪದತ್ತ ದೃಢನಿಶ್ಚಯದಿಂದ ಕೊನೆಯ ಮಾತುಗಳನ್ನು ಹೇಳಿದ. "ನಾನೇ ನಿಮ್ಮ ಮಗನೆಂಬ ಅಭಿಮಾನ ನಿಮಗೇಕೆ? ಆ ಅಭಿಮಾನವನ್ನು ತೊರೆದರೆ ನಿಮಗೆ ಸೌಖ್ಯವುಂಟಾದೀತು. ನಾನು ಶಿವನ ಮೇಳದವ ನಾನು ನಿಮ್ಮನ್ನು ಬಿಟ್ಟು ಎಲ್ಲಿಯೂ ಹೋಗುದಿಲ್ಲ. ತಾಯಿ, ಇಷ್ಟುದಿನ ನೀನು ಕೈಯಲ್ಲಿ ಬಿಕ್ಷಾಪಾತ್ರ ಹಿಡಿದೆ. ಈಗ ನಾನು ಹಿಡಿಯುವೆ. ನೀನು ಹೊತ್ತು ಸಲುಹಿದೆ ಈಗ ದೇವ ಸಲಹುವನು. ಇಷ್ಟುದಿನ ನಿನ್ನೊಬ್ಬಳ ಮಾತುಗಳನ್ನಷ್ಟೆ ಕಲಿಯುತ್ತಿದ್ದೆ. ಇನ್ನು ಸರ್ವರಲ್ಲಿ ಒಂದೊಂದು ನುಡಿ ಕಲಿಯುವೆ. ನಿಮ್ಮನ್ನು ದೂಷಿಸಿದ ಸಮಾಜವನ್ನು ನಾನು ನೋಡಬೇಕಾಗಿದೆ. ಅಲ್ಲಿಯೆ ಪಾಠ ಕಲಿಯಬೇಕಾಗಿದೆ. ನಾನು ನಿಮ್ಮನು ಬಿಟ್ಟು ದೂರವಿರುವದಿಲ್ಲ. ಇಲ್ಲಿಯೆ—ಜಗತ್ತಿನಲ್ಲಿ—ಆದರೆ ವಿಶಾಲ ಜಗತ್ತಿನಲ್ಲಿ ಇರುವೆ. ಅಲ್ಲಿ ನನ್ನನ್ನು ಕಾಣುವಿರಂತೆ. ಅಗೊ, ದೂರದಲ್ಲಿ ಕತ್ತಲೆಯ ಮೊತ್ತವನ್ನು ನೂಕಿ, ಗಿರಿಶಿಖರಗಳನ್ನೇರಿ, ಕೆಂಬಣ್ಣ ರಾರಾಜಿಸುತ್ತದೆ. ಅಲ್ಲಿಯೆ ನನ್ನ ಸಾಧನೆಯ ಫಲ ಕಾಣುತ್ತದೆ. ತಂದೆ, ನೀವು ಮಲಗಿಕೊಳ್ಳಿ. ತಾಯಿ, ನಿನ್ನ ಕೆಲಸ ಪ್ರಾರಂಭಿಸು. ಬೀಸುತ್ತ ಆ ಬಡವರ ಹಾಡುಗಳನ್ನು ಹಾಡು ನಾನು ಕೇಳಬೇಕೆನ್ನುವೆ."

"ಪುಷ್ಪದತ್ತಾ, ಅಗಲುವ ದುಃಖದಲ್ಲಿಯೂ ಹಾಡೆ?"

ಮಗನ ಜುಲುಮೆಯಿಂದ ಬೀಸುತ್ತ ಹಾಡಿದಳು. ಮಾಳಿಯು ಭಾರವಾದ ದುಃಖದಿಂದ ಕಣ್ಣಾಲಿಗಳನ್ನು ಮುಚ್ಚಿ ಗೀತ ಹೇಳಿದಳು. ಮುಂಜಾವದ ತಂಗಾಳಿಯೂ ಸಹ ಕೇಳಿತು. ಹೂಗಳೂ ಸಹ ತಲೆದೂಗಿದವು.

ಆ ಹಾಡು ಮುಗಿಯುವ ವೇಳೆಗೆ ಪುಷ್ಪದತ್ತ ಕೈಜಾಡಿಸಿಕೊಂಡು ಹೊರಟುಹೋಗಿದ್ದ.

ಆಗ ಯಾವ ಮೋಡವೂ ಇರಲಿಲ್ಲ. ಸುಯ್ಯೆನುವ ಗಾಳಿಯೂ ಇರಲಿಲ್ಲ. ಎಲ್ಲೆಲ್ಲಿಯೂ ನೀರವತೆ ಇತ್ತು.

---

# ಕಲ್ಪನಾ ಪ್ರಕಟನೆಗಳನ್ನು ಕುರಿತು

## [ ೮. ಹಾಲಾಹಲ. ಬೆಲೆ: ೧—೧೨—೦ ]

ಲೇಖಕರು: **ಹಿರೇಮಲ್ಲೂರ ಈಶ್ವರನ್**, ಎಂ. ಎ

**ಉರವಕೊಂಡದ ಶ್ರೀ. ಜಗದ್ಗುರುಗಳ ಸನ್ನಿಧಿಯಿಂದ:**

"....ಸುಮತೆಯ ಈಶ್ವರನ್, ನಿಜಕ್ಕೂ ಈ ಕೃತಿ ಸತ್ಯ ಸತ್ವದ ನಿತ್ಯ ಸಂದೇಶವನ್ನು ಎತ್ತಿ ಹಿಡಿದಿರುವ ಉತ್ತಮ ಕಲಾಕೃತಿ. ಅದಕ್ಕೆ ಹೊಗಳಿಕೆ ತೆಗಳಿಕೆಗಳ ಅವಶ್ಯಕವೇ ಬೇಡ. ಅನುಭವವನುವಿನಲ್ಲಿ ಗುಹೇಶ್ವರ, ನಿಮ್ಮ ಶರಣರು ಅನುಪಮ ಸುಖಿಗಳು...."

**Sri. D. V. Gundappa :**

"....You have delicate sensibilities and the gift for translating their responsibilities into vivid and attractive pictures......"

**ಪ್ರೊ. ಎಸ್. ವಿ. ಪರಮೇಶ್ವರಭಟ್ಟ:**

"....ಕುಶಲ ಕತೆಗಾರರಾದ ಈಶ್ವರನ್‌ರ ಕೈವಾಡದಿಂದ ಈ 'ಹಾಲಾಹಲ' ಸಾಹಿತ್ಯದ ಅಮೃತ ಕೃತಿಯಾಗಿ ಪರಿಣಮಿಸಿದೆ...."

**ಪ್ರೊ. ಎಸ್. ಎಸ್. ಮಾಳವಾಡ:**

"....ಮುಟ್ಟಿದರೆ ಮುದುಡುವೆನೆನ್ನುವ ವ್ಯಕ್ತಿತ್ವ ಶ್ರೀ. ಈಶ್ವರನ್‌ರವು. ಆ ವ್ಯಕ್ತಿತ್ವದ ಪ್ರತಿಬಿಂಬ ಅವರ ಸಾಹಿತ್ಯದಲ್ಲಿದೆ. ಅಂತೆಯೇ ಅವರ ಬರವಣಿಗೆ ಮೃದು ಮಧುರವಾಗಿದೆ... "

**ಬನಶಂಕರಿ, ಹಿರೇಮಲ್ಲೂರು:**

"....ಅಣ್ಣಾ, ಹೆಣ್ಣು ಜೀವ ಕಷ್ಟದ್ದು ಎಂದು ನೀನು ಬರೆದಿದ್ದೀ. ದುಃಖದಲ್ಲೇ ನಮಗೆ ಸುಖವಿದೆ. ಸುಖ ಬಿಟ್ಟು ದುಃಖ ಬೇರಿಲ್ಲ. ನಿನ್ನ ಮರುಕ ಹೆಣ್ಣಿಗಾಗಿ ಬೇಡ. ನಮ್ಮ ಶೋಕ ಸಂಗೀತ ಕೇಳಿ ಸಂತೈಸಲು ಬೀಸುವ ಕಲ್ಲಿದೆ, ಕೋಲಾಟವಿದೆ, ಹತ್ತಿಯ ಹೊಲವಿದೆ...."

## ಕಲ್ಪನಾ ಪ್ರಕಟನೆಗಳನ್ನು ಕುರಿತು

## [ ೨. ರಾಮಣ್ಣ ಮಾಸ್ತರು ಬೆಲೆ ೨—೦—೦ ]

ಲೇಖಕರು: **ಮಿರ್ಜಿ ಅಣ್ಣಾರಾಯರು.**

**ಪ್ರೊ. ಎಸ್. ಎಸ್. ಮಾಳವಾಡ:**

"....ಈ ಕಾದಂಬರಿಯಲ್ಲಿ ಹಳ್ಳಿಯ ಜೀವನದ ಒಂದು ಪ್ರಾತಿನಿಧಿಕ ಚಿತ್ರ ಕಂಡುಬರುತ್ತದೆ. ಇಲ್ಲಿಯ ಪಾತ್ರಗಳ ವಾಸ್ತವತೆಯನ್ನು ಹಳ್ಳಿಯಿಂದಲೇ ಬಂದ ನಾನಂತೂ ಮನಸಾರೆ ಮೆಚ್ಚಿಕೊಂಡಿದ್ದೇನೆ.... 'ರಾಮಣ್ಣ ಮಾಸ್ತರು' ಕಾದಂಬರಿ ಹಳ್ಳಿಯ ಸಾಲೆಯ ಮಾಸ್ತರರ ಒಂದು ಚಿಕ್ಕ ಮಹಾಕಾವ್ಯ...."

**ಪ್ರೊ. ರಂ. ಶ್ರೀ. ಮುಗಳಿ:**

"....ದೇಶಿಯನ್ನು ಔಚಿತ್ಯವನ್ನರಿತು ಉಪಯೋಗಿಸುವಲ್ಲಿ ಅದರ ಸಂಪತ್ತಿಯನ್ನು ಸೂರೆಮಾಡುವಲ್ಲಿ ಅಣ್ಣಾರಾಯರು ಮೆಚ್ಚತಕ್ಕ ಗುಣವನ್ನು ತೋರಿದ್ದಾರೆ...."

**ಜಯಕರ್ನಾಟಕ, ಧಾರವಾಡ:**

"....ದೇಶಿ ಭಾಷೆಯನ್ನು ತಂದು ಕಾದಂಬರಿಯ ಶೈಲಿಸಂವಾದಗಳಲ್ಲಿ ಎರಕ ಹೊಯ್ಯುವ ಶಕ್ತಿ ಅಣ್ಣಾರಾಯರಂತಹ ಜೀವನ ವಿಮರ್ಶಕರಿಗೇನೇ ಸಾಧ್ಯ...."

**ಕಲ್ಪನಾವಿಲಾಸಿ, ಕಾಮರ್ಸ ಕಾಲೇಜು, ಹುಬ್ಬಳ್ಳಿ:**

"....ರಾಮಣ್ಣ ಮಾಸ್ತರು ಗರಿಗೆದರಿ ಬಾನಿನೆಡೆಗೆ ಹಾರುವ ಹಕ್ಕಿ. ರೆಕ್ಕೆ ಸೋತರಿಲ್ಲ. ದಾರಿಗೆ ಬರಿ ದಾರಿ ಹಬ್ಬಿದ್ದರೂ ಅಡ್ಡಿಯಿಲ್ಲ. ನಕ್ಷತ್ರವತ್ತ ಗುರಿಯಿಟ್ಟುಕೊಂಡು ಹೊರಟ ಆ ಆಶಾವಾದಿಗೆ ಜಗತ್ತೇ ಹೇಡಿಯಂತೆ ಕಂಡಿತು. ಏನು ಸೋಜಿಗ! ಮಿರ್ಜಿ ಮಾಸ್ತರೇ, ಬಹು ಸೂಕ್ಷ್ಮವಾಗಿ ನಿಮ್ಮ ಕಾದಂಬರಿಯ ಕುಂಚ ಎಳೆದಿದ್ದೀರಿ! ಒಳ್ಳೆಯ ಕಲಾವಿದರು ನೀವು...."

# ಕಲ್ಪನಾ ಪ್ರಕಟನೆಗಳನ್ನು ಕುರಿತು

## [ ೩. ಫಲಸಂಚಯ. ಬೆಲೆ: ೧—೮—೦ ]

ಲೇಖಕರು: **ವರದರಾಜ ಹುಯಿಲಗೋಳ**

ಪ್ರಿನ್ಸಿಪಾಲ ವಿ. ಕೃ. ಗೋಕಾಕರು. (ಮುನ್ನುಡಿಯಲ್ಲಿ)

"...ಕತೆಗಾರನಿಗೆ ಇರಬೇಕಾದ ಜೀವನ ದೃಷ್ಟಿ ವರದರಾಜರ ಕೃತಿಗಳಲ್ಲಿದೆಯೆಂಬ ಮಾತು ಈ ಸಂಗ್ರಹದ ಉದ್ದಕ್ಕೂ ಎದ್ದು ಕಾಣುತ್ತದೆ....ಬರವಣಿಗೆಯಲ್ಲಿ ಒಂದು ಲಾಲಿತ್ಯವಿದೆ, ಸುಭಗತೆಯಿದೆ....ಬಡತನದ ಹಾಗು ಸಮಾಜದ ಹೃದಯ ಶೂನ್ಯತೆಯ ಮೂಲಕ ಒಳ್ಳೆಯ ಜೀವಗಳು ಪಡುವ ಕಷ್ಟ, ಅವುಗಳ ಒಳ್ಳೆಯತನ ಸಹ ಲೋಪವಾಗುವ ಸಂಭವ, ಗುಣ ಹಾಗು ಪರಿಸ್ಥಿತಿಯ ನಡುವಿನ ತಿಕ್ಕಾಟ,—ಇವುಗಳನ್ನು ವರದರಾಜರು ಮಾರ್ಮಿಕವಾಗಿ ಚಿತ್ರಿಸಬಲ್ಲರು. ಕಲಾವಂತಿಕೆಯೂ ಇಲ್ಲಲ್ಲಿ ಅವರ ಚಿತ್ರಣಕ್ಕೆ ಕಳೆಕೊಡುತ್ತದೆ...."

**ಕರ್ನಾಟಕ ಕುಲಪುರೋಹಿತ ಆಲೂರ ವೆಂಕಟರಾಯರು:**

"....ಕತೆಗಾರನು ತನ್ನ ಪಾತ್ರಗಳಿಂದ ಸಮಾಜಕ್ಕೆ ಸರಿಯಾದ ದಾರಿಯನ್ನು ತೋರುವವನಲ್ಲದಿದ್ದರೂ, ಸೂಚಿಸುವವನಾಗಿರಬೇಕು. ವರದರಾಜರ ಕತೆಗಳಲ್ಲಿ ಈ ಗುಣವು ಸಾಕಷ್ಟು ಕಂಡು ಬಂದಿದೆ. ವೆಂಕಪ್ಪ, ಮಂಗಪ್ಪ, ಹನುಮಂತ ಇವರು ಬಡವರಾದರೂ ಇವರಲ್ಲಿಯ ಸಾತ್ವಿಕ ಭಾವನೆಯೂ, ದೃಢಭಕ್ತಿಯೂ ಎಲ್ಲರಿಗೂ ಆದರ್ಶವಾದವುಗಳು.....'ಫಲಸಂಚಯ'ದ ಕತೆಗಳು ಕಾರಂಜಿಯೊಳಗಿಂದ ಮುತ್ತಿನ ಹನಿಗಳು ಒಂದಕ್ಕೊಂದು ಹೆಚ್ಚಿಗೆ ಉನ್ನತವಾಗಿಯೂ, ಚೆಂದವಾಗಿಯೂ ಹೊರಚಿಮ್ಮುವಂತೆ ಚಿಮ್ಮಿರುತ್ತವೆ...."

**ಶ್ರೀ. ಮಿರ್ಜಿ ಅಣ್ಣಾರಾಯರು:**

"....ಮನೋವಿಶ್ಲೇಷಣಾತ್ಮಕ ರೀತಿಯಲ್ಲಿ ಕತೆ ಬರೆಯುವುದು ಇವರಿಗೆ ಹೆಚ್ಚಾಗಿ ಸಾಧಿಸಿದೆ. ಸಾಮಾನ್ಯ ವಸ್ತುಗಳನ್ನು ಆಯ್ದುಕೊಂಡರೂ, ಕತೆಯಲ್ಲಿ ಅವುಗಳಿಗೆ ಮಿರುಗು ಕೊಡುವ ಕಲಾಕುಶಲತೆಯಿದೆ. 'ಫಲಸಂಚಯ'ದ ಕತೆಯಲ್ಲಿ ಬಂದಿರುವ ನಾಲ್ಕು ರಾತ್ರಿಗಳ ತಂತ್ರವಂತೂ ನವೀನವಾಗಿಯೂ, ಮನಂಬುಗುವಂತಹದೂ ಇದೆ...."

## ಕಲ್ಪನಾ ಗ್ರಂಥಮಾಲೆಯ ಯೋಜನೆ

# ಕಲ್ಪನಾ ಗ್ರಂಥಮಾಲಾ, ಹುಬ್ಬಳ್ಳಿ.

ಸಂಪಾದಕರು:

**ಹಿರೇಮಲ್ಲೂರ ಈಶ್ವರನ್, ಎಂ. ಎ.,**
**ಮಿರ್ಜಿ ಅಣ್ಣಾರಾಯರು**

ನಾಡಿನ ಬೌದ್ಧಿಕ ಮತ್ತು ಸಾಂಸ್ಕೃತಿಕ ಪ್ರಗತಿಯೆ ಕಲ್ಪನಾ ಗ್ರಂಥಮಾಲೆಯ ಗುರಿ. ಪ್ರತಿ ವರುಷವು ಸುಮಾರು ೭೫೦ ರಷ್ಟು ಪುಟಗಳ ಸಾಹಿತ್ಯವನ್ನು ಒದವಿಸಲಾಗುವದು. ವರುಷದಲ್ಲಿ ಎರಡುಬಾರಿ ಅಂದರೆ ಜನೆವರಿ ಮತ್ತು ಜೂನ ತಿಂಗಳ ಮೊದಲನೆಯ ವಾರದಲ್ಲಿ ಪುಸ್ತಕಗಳನ್ನು ಅಂಚೆಯ ಮೂಲಕ ಕಳುಹಿಸಲಾಗುವದು. ಅಂಚೆಯ ವೆಚ್ಚ ಸಹಿತ ಕೇವಲ ೫-೮-೦ ಚಂದಾಹಣವನ್ನು ಇಡಲಾಗಿದೆ

ಗ್ರಂಥಮಾಲೆಯ ಹೊಸವರುಷವು ಯಾವಾಗಲೂ ಜನೆವರಿ ಒಂದನೆಯ ತಾರೀಖಿನಿಂದ ಪ್ರಾರಂಭವಾಗುವದು. ಆದರೂ ಚಂದಾದಾರರಾಗುವವರು ವರುಷದಲ್ಲಿ ಬೇಕಾದಾಗ ಆಗಬಹುದು. ಅವರಿಗೆ ಆ ವರುಷದ ಗ್ರಂಥಗಳೆಲ್ಲವೂ ಸಲ್ಲುವವು. ನಿಮ್ಮ ಚಂದಾಹಣ 'ಕಾರ್ಯವಾಹಕರು, ಕಲ್ಪನಾ ಗ್ರಂಥಮಾಲಾ ಹುಬ್ಬಳ್ಳಿ' ಇವರಿಗೆ ಕಳುಹಿಸಿರಿ.

## ೧೯೪೪ನೆಯ ವರುಷದ ಪ್ರಕಟನೆಗಳು.

೧. **ಹಾಲಾಹಲ** (ಸಣ್ಣ ಕತೆಗಳ ಸಂಕಲನ) ಹಿರೇಮಲ್ಲೂರ ಈಶ್ವರನ್, ಎಂ. ಎ.
೨. **ರಾಮಣ್ಣ ಮಾಸ್ತರು** (ಕಾದಂಬರಿ) ಮಿರ್ಜಿ ಅಣ್ಣಾರಾಯರು.
೩. **ಫಲಸಂಚಯ** (ಜೀವನ ಚಿತ್ರಗಳು) ವರದರಾಜ ಹುಯಿಲಗೋಳ, ಎಂ. ಎ
೪. **ಮಹಾದೇವಿಯಕ್ಕ** (ಜೀವನ ವಿಮರ್ಶೆ) ಪ್ರೊ. ಕೆ. ಜಿ. ಕುಂದಣಗಾರ, ಎಂ. ಎ.
೫. **ರಾಜಾರಾಣಿ ದೇಖೋ!** (ಬಾಳಿನ ನೋಟಗಳು) ಹಿ. ಈಶ್ವರನ್, ಎಂ. ಎ.

## ಕಲ್ಪನಾ ಗ್ರಂಥಪ್ರಕಾಶನ ಸಮಿತಿ, ಹುಬ್ಬಳ್ಳಿ